# ಚಂದಮಾಮ ಕ್ಯಾಮೆಲ್
## ಬಣ್ಣಹಾಕುವ ಸ್ಪರ್ಧೆ
ಪ್ರವೇಶಧನವಿಲ್ಲ



**ಬಹುಮಾನ ಗಳಿಸಿರಿ.**

ಕ್ಯಾಮೆಲ್ — ಪ್ರಥಮ ಬಹುಮಾನ ರೂ. 15
ಕ್ಯಾಮೆಲ್ — ದ್ವಿತೀಯ ಬಹುಮಾನ ರೂ. 10
ಕ್ಯಾಮೆಲ್ — ತೃತೀಯ ಬಹುಮಾನ ರೂ. 5
ಕ್ಯಾಮೆಲ್ — 5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮೆಲ್ — 10 ಸರ್ಟಿಫಿಕೇಟ್‌ಗಳು

ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮೆಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ
P.B. No. 9928, COLABA, Bombay-400 005.
ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name ............................ Age ..................

Address ..............................................

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

VISION

ದಯವಿಟ್ಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.
ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು : 30—4—1982

**CONTEST NO.24**



# ಚಂದಮಾಮ

ಏಪ್ರಿಲ್ 1982

★

ಈ ಸಂಚಿಕೆಯಲ್ಲಿ·



★


ಬಿಡಿ ಪ್ರತಿ ರೂ. ೧-೭೫

ವಾರ್ಷಿಕ ಚಂದಾ ರೂ. ೨೧.೦೦

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ಧರ್ಮನ್ಯಾಯಗಳನ್ನು ಅನುಸರಿಸಿ ನಡೆಯುವವರು ನೋಡುವವರಿಗೆ ಸಾಧುಗಳಾಗಿಯೇ ಕಾಣುತ್ತಾರೆ. ಅಂಥವರನ್ನು ಮೋಸಪಡಿಸುವುದು ಸುಲಭವೆಂದು ಧೂರ್ತರಿಗೆ ಕಾಣುತ್ತದೆ. ಆದರೆ ದೊಡ್ಡ ಮನಸ್ಸಿನವರ ಮುಂದೆ ಧೂರ್ತರ ಆಟ ನಡೆಯಲಾರದು. ಅಂತಹವರು ಅಲ್ಲಲ್ಲಿರುವುದರಿಂದಲೇ ಪ್ರಪಂಚವು ನಡೆಯುತ್ತದೆ. ಧೂರ್ತನೊಬ್ಬನು ಸಾಧುವಿನ ಮೇಲೆ ಹಾಯಲೆತ್ನಿಸಿ ಹೇಗೆ ಭಂಗಗೊಂಡನೆಂಬುದನ್ನು, ಈ ಸಂಚಿಕೆಯಲ್ಲಿರುವ "ದಿವಾಣದ ಕೋಣಗಳು" ಎಂಬ ಸಣ್ಣಕಥೆಯಿಂದ ತಿಳಿಯಬಹುದು.

### ಅಮರವಾಣಿ

**ಕ್ಷಚಿದ್ರುಷ್ಟಃ ಕ್ಷಚಿತ್ತುಷ್ಟ ದುಷ್ಟಸ್ತುಷ್ಟಃ ಕ್ಷಚಿತ್ ಕ್ಷಚಿತ್**
**ಅವ್ಯವಸ್ಥಿತ ಚಿತ್ತಾನಾಂ ಪ್ರಸಾದೋಽಪಿ ಭಯಂಕರಃ**

ಸ್ಥಿರಬುದ್ಧಿ ಇಲ್ಲದವನು ಈ ಕ್ಷಣದಲ್ಲಿ ತೃಪ್ತಿಯನ್ನೂ, ಮರುಕ್ಷಣದಲ್ಲಿ ಅತೃಪ್ತಿಯನ್ನೂ ಪ್ರದರ್ಶಿಸುತ್ತಾನೆ. ಆದುದರಿಂದ ಅಂಥವರ ದಯೆಗೆ ಪಾತ್ರವಾಗುವುದೂ ಅಪಾಯವೇ.

ಸಂಪುಟ : ೩೮ ಏಪ್ರಿಲ್ '೮೭ ಸಂಚಿಕೆ : ೪

ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦





# ಬಂಗಾರದ ಮೋಹ

ಒಂದು ಊರಿನಲ್ಲಿ ರವಿಯೆಂಬ ಹುಡುಗನಿದ್ದನು, ಅವನಿಗೆ ಬಾಲ್ಯವು ಕಳೆದು ಚಿಗುರುಮೀಸೆ ಕಂಡೂ ಕಾಣದ ಹಾಗೆ ಈಗಾಗಲೇ ಪ್ರಾರಂಭವಾಗಿತ್ತು. ಅವನ ತಾಯಿ ಆಗಾಗ ಗುಡಿಗೆ ಹೋಗಿ ಬರುವುದುಂಟು. ಒಂದು ದಿನ ತಾಯಿಯೊಂದಿಗೆ ಗುಡಿಗೆ ಹೋದ ರವಿ, ದೇವರ ದರ್ಶನಮಾಡಿ ಹೊರಗೆ ಬಂದನು. ಅವನ ತಾಯಿ ಗರ್ಭಗುಡಿಯಲ್ಲೇ ನಿಂತಿದ್ದಳು.

"ಹೊಸ ಚಪ್ಪಲಿ ಲಪಟಾಯಿಸಬೇಕೆಂದು ಗುಡಿಗೆ ಬಂದಿಯಾ?" ಎಂದು ನಗುತ್ತ ಒಬ್ಬಳು ಹುಡುಗಿ ರವಿಯ ಬಳಿಗೆ ಬಂದು, "ರಘು ಎಲ್ಲಿ ಯಾದರೂ ಕಣ್ಣಿಗೆ ಬಿದ್ದರೆ ಕೂಡಲೇ ಮನೆಗೆ ಕಳಿಸು ಅಂತ ನಿನ್ನ ಅಪ್ಪ ಹೇಳಿದ್ದಾರೆ." ಎಂದಳು ಆ ಹುಡುಗಿ.

ಇವಳು ತನ್ನನ್ನು ಯಾವನೋ ರಘು ಎಂದು ಕೊಂಡು ಮಾತಾಡುವಳೆಂದು ತಿಳಿದು ರವಿ, "ನನ್ನ ತಂದೆ ನನ್ನ ಚಿಕ್ಕಂದಿನಲ್ಲೇ ತೀರಿ ಹೋದರು. ನಾನು ರಘುವೇ ಅಲ್ಲ" ಎಂದನು.

ಅವಳು ಆಶ್ಚರ್ಯದಿಂದ ರವಿಯನ್ನು ಮೇಲಿನಿಂದ ಕೆಳಗಿನವರೆಗೂ ನೋಡಿ, "ಏನಿದು? ನನ್ನ ಕಣ್ಣು ಗಳನ್ನು ನಾನೇ ನಂಬದೆ ಹೋಗುತ್ತೇನಲ್ಲಾ! ನೀನು ಅಚ್ಚ ರಘುವಿನ ಹಾಗೇ ಇರುವಿ. ನೀವಿಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡರೆ ಕನ್ನಡಿಯ ಮುಂದೆ ನಿಂತ ಹಾಗೇ ಸರಿ." ಎಂದಳು ಹುಡುಗಿ.

ಅಚ್ಚೊತ್ತಿದ ಹಾಗೇ ತನ್ನಂತಹ ಇನ್ನೊಬ್ಬನಿರುವ ನೆಂದು ತಿಳಿದು ರವಿಗೆ ಬಹಳ ಕುತೂಹಲ ಉಂಟಾಯಿತು. "ಹಾಗಾದರೆ ಅವನನ್ನೊಮ್ಮೆ ನೋಡಿದರೆ ಒಳ್ಳೇದಾದೀತು!" ಎಂದನು.

"ಹಾಗಾದರೆ ಬಾ ನನ್ನೊಂದಿಗೆ" ಎಂದು ಅವಳು ರವಿಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ಕೋಣೆಯೊಳಗಿನ ಒಂದು ಕುರ್ಚಿಯನ್ನು ತೋರಿಸಿ, "ಇಲ್ಲಿ ಕುಳಿತುಕೋ. ರಘು ತೋಟದಲ್ಲಿರುವ ಹಾಗಿದೆ. ಈಗಲೇ ಕರೆದುಕೊಂಡು ಬರುತ್ತೇನೆ." ಎಂದು ಹೇಳಿ ಥಕ್ಕನೆ ಬಾಗಿಲನ್ನು ಮುಚ್ಚಿದಳು.

ಅದನ್ನು ನೋಡಿ ರವಿ ಆಶ್ಚರ್ಯದಿಂದ ಟಕಮಕ ನೋಡುತ್ತಿರಲು, ಆ ಹುಡುಗಿ ಕಿಟಕಿಯ ಮೂಲಕ ಒಂದು ಕಾಗದವನ್ನೂ, ಪೇನಾವನ್ನೂ ಅವನ ಕಡೆಗೆ ನೀಡಿ, "ಲೋ! ಈಗ ನೀನು ನನ್ನ ಖೈದಿ! ಈ ಕಾಗದದ ಮೇಲೆ ನಾನು ಹೇಳುವ ಹಾಗೆ ಬರೆ. ಯಾಕೆ ಏನೆಂದು ಕೇಳಬೇಡ. ಹಾಗೆ ಬರೆದರೆ ನಿನ್ನ

ಎಂ. ಕೆ. ಈಶ್ವರರಾವ್

ಅಮ್ಮನಿಗೆ ಯಾವ ಕಷ್ಟವೂ ಬಾರದು" ಎಂದಳು. ರವಿ ಬೆರಗಾಗಿ ಕಣ್ಣರಳಿಸಿ, "ಯಾರು ನೀನು? ನನ್ನನ್ನು ಏಕೆ ಹೀಗೆ ಬಂಧಿಸಿದ್ದೀ? ಏನಿದು ಆಟ?" ಎಂದು ಕೋಪದಿಂದ ಕೇಳಿದನು.

"ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರ ಕೊಡಬೇಕೆಂದೇನೂ ಇಲ್ಲ. ಮೊದಲು ಬರೆ" ಎಂದಳು ಜೋರಿನಿಂದ.

ರವಿ ಅವಳು ಹೇಳಿದ ಹಾಗೆಯೇ ಬರೆದನು. ತಾನು ಕ್ಷೇಮವಾಗಿ ಮನೆಗೆ ಬರಬೇಕಾದರೆ ಈ ಕಾಗದ ತರುವವಳ ಕೈಗೆ ಮನೆಯಲ್ಲಿರುವ ಎಲ್ಲಾ ನಗಗಳನ್ನೂ ಕೊಡಬೇಕು, ಎಂದಿತ್ತು ಆ ಬರವಣಿಗೆಯಲ್ಲಿ!

ಅವಳು ಆ ಕಾಗದ ತೆಗೆದುಕೊಂಡು ಮನೆಯ ಬಾಗಿಲು ಹಾಕಿ ಕೊಂಡಿಸಿಗಿಸಿ ಹೊರಟಳು,

ಆ ಹುಡುಗಿ ಗುಡಿಯ ಹತ್ತಿರ ಹೋದಾಗ ರವಿಯ ತಾಯಿ ರವಿಯನ್ನು ಕಾಣದೆ ದಿಕ್ಕು ದಿಕ್ಕು ನೋಡುತ್ತಿದ್ದಳು, ಅವಳು ರವಿಯ ತಾಯಿಯ ಬಳಿಗೆ ಹೋಗಿ ಆ ಕಾಗದವನ್ನು ಅವಳ ಕೈಗೆ ಕೊಟ್ಟಳು.

ಅದನ್ನು ಓದಿದ ಕೂಡಲೇ ರವಿಯ ತಾಯಿಯ ಮುಖವು ಕಂದಿಹೋಯಿತು. ತಂದುಕೊಟ್ಟವಳ ಮುಖವನ್ನೇ ಟಕಮಕ ನೋಡಿದಳು.

"ಹೀಗೆ ಮುಖ ನೋಡುತ್ತಾ ನಿಂತರೆ ನಿಮ್ಮ ಮಗನ ಪ್ರಾಣಕ್ಕೆಬಂದೀತು. ಬೇಗ ಬರೆದಹಾಗೆ ಮಾಡಿಬಿಡಿ. ಇಲ್ಲದಿದ್ದರೆ ನಾನೂ ಸಾಯ ಬೇಕಾದೀತು" ಎಂದಳು ಆ ಹುಡುಗಿ.

ಯಾರೋ ಈ ಹುಡುಗಿಯ ಮೂಲಕ ಹೀಗೆ ಮಾಡಿಸಿದ್ದಾರೆಂದು ರವಿಯ ತಾಯಿ ಹೆದರಿ, "ನನ್ನ ಮಗನಿಗೆ ಏನೂ ಆಗದಿದ್ದರೆ ಸಾಕಪ್ಪಾ. ಬಾ, ಇದ್ದದ್ದೆಲ್ಲಾ ಕೊಡುತ್ತೇನೆ" ಎಂದು ನಡುಗುವ ಕಂಠದಿಂದ ಹೇಳಿ ಹೊರಟಳು.

ಅವಳು ಆ ಹುಡುಗಿಯನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ಕಬ್ಬಿಣದ ಪೆಟ್ಟಿಗೆ ಇರುವ ಒಂದು ಕೋಣೆಯನ್ನು ತೋರಿಸಿ, "ನಿನಗೆ ಬೇಕಾದ



ನಗಗಳನ್ನು ನೀನೇ ತೆಗೆದುಕೋ. ಇರುವುದೆಲ್ಲಾ ಆ ಪೆಟ್ಟಿಗೆಯಲ್ಲಿದೆ. ಬೇಗ ನನ್ನ ಮಗನನ್ನು ಕಳಿಸು" ಎನ್ನುತ್ತಾ ಬಾಗಿಲ ಹತ್ತಿರ ಹೋದಳು.

ಆ ಹುಡುಗಿ ನಗಗಳನ್ನು ತೆಗೆದು ಗಂಟು ಕಟ್ಟಿಕೊಳ್ಳುವಾಗ ರವಿಯ ತಾಯಿ, ಕೋಣೆಯ ಬಾಗಿಲು ಎಳೆದು ಹೊರಗಿನಿಂದ ತಾಳಹಾಕಿ, ಕಿಟಕಿಯ ಹತ್ತಿರ ನಿಂತು, "ನೀನು ಯಾರು, ಯಾರು ಹೀಗೆ ಮಾಡಿಸಿದವರು ಎಂಬುದೆಲ್ಲಾ ಹೇಳು, ನನ್ನ ಮಗ ಈ ಮನೆಗೆ ಬಂದ ಮೇಲೆ ನೀನು ಇಲ್ಲಿಂದ ಹೋಗುವಿ. ನಿನ್ನ ಮನೆಗಲ್ಲ, ಸೆರೆಮನೆಗೆ." ಎಂದು ಹೇಳಿ, ಅದಕ್ಕೇನೂ ಉತ್ತರ ಕೊಡದಿರುವವಳನ್ನು ನೋಡಿ ಅಡಿಗೇಮನೆಯ ಕಡೆಗೆ ಹೋದಳು.

ಅಷ್ಟು ಹೊತ್ತಿಗೆ ಚೆನ್ನಾಗಿ ಕತ್ತಲಾಯಿತು, ಯಾವುದೋ ಮನೆಯೊಳಗೆ ಸಿಕ್ಕಿಬಿದ್ದ ರವಿ, ತನ್ನನ್ನು ಬಂಧಿಸಿದವಳನ್ನು ಕುರಿತು ಆಲೋಚಿಸುತ್ತಾ ಕುರ್ಚಿಯಿಂದೆದ್ದು ದೀಪ ಬೆಳಗಿಸಿದನು,



ಸ್ವಲ್ಪವೂ ಇಲ್ಲ," ಎಂದು ತನಗೆ ತಾನೇ ಹೇಳಿಕೊಂಡಂತೆ ಬಾಯಿಬಿಟ್ಟೇ ಹೇಳಿದಳು.

"ಜತೆ ಕಳ್ಳರಾಗಿ ನೀವಿಬ್ಬರೇನಾ, ಇನ್ನೂ ಯಾರಾದರೂ ಇದ್ದಾರೋ ? ಆ ನಗಗಳಲ್ಲಿ ನಿಮ್ಮ ಪಾಲು ಎಷ್ಟು ?" ಎಂದ ರವಿ ಗೇಲಿಯಾಗಿ.

"ಛೀ ಛೀ ! ನಾವೇನೂ ಕಳ್ಳರಲ್ಲ. ನನ್ನ ಹೆಸರು ಅನಿತೆ. ನಡೆದ ಸಂಗತಿ ಹೇಳಿದರೆ ನೀವು ಸರಳೆಯನ್ನು ಸ್ವಲ್ಪವಾದರೂ ಅರ್ಥಮಾಡಿಕೊಳ್ಳುವಿರಿ." ಎಂದು ಅವಳು ರವಿಗೆ ನಡೆದ ಸಮಾಚಾರವನ್ನು ಹೇಳಿದಳು.

ಸರಳೆಯೂ, ಅನಿತೆಯೂ ಚಿಕ್ಕಂದಿನಿಂದಲೂ ಅಕ್ಕಪಕ್ಕದ ವಠಾರದವರಾಗಿದ್ದು, ಒಟ್ಟೊಟ್ಟಿಗೇ ಬೆಳೆದು ದೊಡ್ಡವರಾದರು. ಸರಳೆ ತುಂಬ ಧೈರ್ಯಶಾಲಿನಿಯಾದವಳು, ಸಾಹಸಪ್ರಿಯಳು. ಅನಿತೆಯ ತಂದೆ ವೈದ್ಯ ವೃತ್ತಿಯವನು. ತಂದೆಯ ಹತ್ತಿರ ಅವಳೂ ವೈದ್ಯವನ್ನು ಕಲಿತುಕೊಂಡಿದ್ದಳು. ತಂದೆ ಸತ್ತು ಹೋದ ಮೇಲೆ ಅನಿತೆ ಸ್ವಯಂ ವೈದ್ಯ ವೃತ್ತಿ ನಡೆಸುತ್ತ ತಾಯಿಯನ್ನು ಪೋಷಿಸಿಕೊಂಡಿದ್ದಳು.

ನಾಲ್ಕು ದಿನಗಳ ಕೆಳಗೆ ಸರಳೆಯ ತಾಯಿ ತಂದೆಯರೊಂದಿಗೆ ನೆರೆಯ ಊರಿನಲ್ಲಿ ನಡೆದ ಬಂಧುಗಳ ಮನೆಯ ಮದುವೆಗೆ ಅನಿತೆ ಕೂಡ ಹೋಗಿದ್ದಳು. ಆ ಸಮಯದಲ್ಲಿ ಅನಿತೆಯ ಮದುವೆಯ ಪ್ರಸ್ತಾಪ ಬಂದಿತು. ಮದುವೆಯ ಹುಡುಗ ಅನಿತೆಯನ್ನು ನೋಡಿದ್ದಾನಂತೆ. ಅವನು ದಿನಾ ತನ್ನ ತಾಯಿಯೊಂದಿಗೆ ಗುಡಿಗೆ ಹೋಗುವವನಂತೆ. ಗುಡಿಯ ಆವರಣದಲ್ಲಿರುವ ತೋಟದಲ್ಲಿ ಔಷಧಿಗಳಿಗೆ ಉಪಯೋಗವಾಗುವ ಗಿಡಮೂಲಿಕೆಗಳಿಗಾಗಿ ಹೋಗಿ ಬರುವ ಅನಿತೆಯನ್ನು ಅವನು ಬಹಳಸಾರಿ ನೋಡಿದ್ದಾನಂತೆ, ಅವಳನ್ನೇ ಮದುವೆಯಾಗ ಬೇಕೆಂದು ಅವನ ಇಷ್ಟವಂತೆ. ಆದರೆ ಅನಿತೆ ಅವನನ್ನು ಮೊದಲನೇ ಸಾರಿ ನೋಡುವುದು, ಆ ಮದುವೆಯಲ್ಲೇ. ಈಗ ಬಂದ ತೊಂದರೆ ಏನಂದರೆ ಆ ವರನ

ಒಂದೆರಡು ನಿಮಿಷಗಳು ಕಳೆಯುವಷ್ಟರಲ್ಲಿ ಪಕ್ಕದ ವಠಾರದಿಂದ ಹುಡುಗಿಯೊಬ್ಬಳು ಬೇಗ ಬೇಗನೆ ಬಂದು, ಸುಮ್ಮನೆ ಕೊಂಡಿ ಸಿಗಿಸಿದ ಬಾಗಿಲನ್ನು ತೆಗೆದು ಮನೆಯೊಳಗೆ ಬಂದು "ಸರಳಾ ! ಒಂದು ಶುಭವಾರ್ತೆ ಹೇಳಲಿಕ್ಕೆ ಬಂದೆಕಣೇ ! ಮನೆಯೊಳಗೆ ಯಾರೋ ಇರುವ ಹಾಗಿದೆ ? ಹೊರಗೆ ಬಾಗಿಲು ಕೊಂಡಿ ಹಾಕಿದೆ. ಅರೆ ! ಯಾರೇ ನಿನ್ನನ್ನು ಕೋಣೆಯೊಳಗಿಟ್ಟು ಹೊರಗೆ ಕೊಂಡಿಹಾಕಿದ್ದು !" ಎನ್ನುತ್ತಾ ಬಾಗಿಲನ್ನು ತೆರೆದು ರವಿಯನ್ನು ನೋಡಿ ಆಶ್ಚರ್ಯಪಟ್ಟು, "ಯಾರು ನೀವು ? ಸರಳೆ ಎಲ್ಲಿ ?" ಎಂದು ಕೇಳಿದಳು ಆ ಹುಡುಗಿ. "ಸರಳೆಯೋ ಅವಳು ? ನನ್ನನ್ನು ಇಲ್ಲಿ ಬಂಧಿಸಿ ನನ್ನ ಅಮ್ಮನ ನಗಗಳನ್ನು ದೋಚಿಕೊಳ್ಳಲು ಹೋಗಿದ್ದಾಳೆ." ಎಂದ ರವಿ ಕೋಪದಿಂದ.

ಅವಳು ಕಣ್ಣರಳಿಸಿ, "ಎಂತಹ ತಪ್ಪುಮಾಡಿಬಿಟ್ಟಳು ! ಅವಳಿಗೆ ಆವೇಶದ ಹೊರತು ಆಲೋಚನೆ

ತಾಯಿ ತಂದೆಯರಿಗೆ ಅಪರಿಮಿತ ಬಂಗಾರದ ಮೋಹ. "ಹುಡುಗಿಗೆ ಕನಿಷ್ಠ ಪಕ್ಷ ಹತ್ತು ತೊಲೆ ಚಿನ್ನ ಹಾಕಬೇಕು. ಅದಕ್ಕಿಂತ ಕಡಿಮೆಗೆ ಈ ಮದುವೆ ಸಾಧ್ಯವಿಲ್ಲ" ಎಂದು ವರನ ತಾಯಿ ಅನಿತೆಯ ತಾಯಿಯೊಂದಿಗೆ ಖಂಡಿತವಾಗಿ ಹೇಳಿಬಿಟ್ಟಳು. ಅನಿತೆಯ ದಾಗಿ ಅರ್ಧ ತೊಲೆ ಬಂಗಾರವೂ ಇರಲಿಲ್ಲ.

ಸರಳೆಯ ಬಂಧುಗಳ ಮನೆಯ ಮದುವೆಯ ಗದ್ದಲವೆಲ್ಲ ಮುಗಿದು ಮನೆ ಸಪ್ಪಗಾದ ಮೇಲೆ ಆ ಹಳ್ಳಿಯಲ್ಲಿ ಬೇಸರವಾಗಿ ಅನಿತೆ ಒಬ್ಬಳೇ ಮನೆಗೆ ತಿರುಗಿ ಬಂದಳು. ಮದುವೆಗೆ ಹೋಗದೆ ಮನೆ ನೋಡಿ ಕೊಂಡಿದ್ದ ಸರಳೆಗೆ ಅನಿತೆಯ ಮದುವೆಯ ಮಾತು ಹೊರಟದ್ದು ಅನಿತೆಯಿಂದಲೇ ತಿಳಿಯಿತು. "ಹಾಳು ಬಂಗಾರದ ಮೋಹದಲ್ಲಿ ಅನಿತೆಯಂತಹ ಬಂಗಾರದ ಸೊಸೆಯನ್ನು ಬಿಡುತ್ತಾಳಂತೇನು ಆ ಮಹಾ ತಾಯಿ? ದಿನಾ ಮಗನೊಂದಿಗೆ ಗುಡಿಗೆ ಬರುತ್ತಾಳಷ್ಟೆ? ಈ ದಿನವೇ ಆಕೆಗೆ ತಕ್ಕ ಪಾಠಕಲಿಸುತ್ತೇನೆ." ಎಂದಳು ಸರಳೆ ಆವೇಶದಿಂದ.

"ಬೇಡ, ಸುಮ್ಮನಿರು ಸರಳಾ. ಈ ಸಂಗತಿ ಮರತೇ ಬಿಡು" ಎಂದು ಅನಿತೆ ಅವಳನ್ನು ತಡೆದಳು.

ಇದು ನಡೆದ ದಿನ ಸಾಯಂಕಾಲದಲ್ಲಿ ಅನಿತೆ ತನ್ನ ಮನೆಯ ಪಕ್ಕದ ಬೀದಿಯಲ್ಲಿದ್ದ ಒಬ್ಬ ರೋಗಿಗೆ ಔಷಧಕೊಟ್ಟು ಬರುತ್ತಿದ್ದಾಗ, ದಾರಿಯಲ್ಲಿ ಅವಳನ್ನು ನೋಡಲು ಬರುವ ಅದೇ ವರನು ಇದಿರಾಗಿ ಬಂದು, "ಅನಿತಾದೇವಿ. ನಿನ್ನ ಮನೆಗೇ ಹೊರಟಿದ್ದೇನೆ. ನನ್ನ ಅಮ್ಮ ಕೆಟ್ಟ ಹೊಟ್ಟೇ ನೋವಿನಿಂದ ನರುಳುತ್ತಾಳೆ. ಸ್ವಲ್ಪ ಬಂದು ನೋಡುವಿಯಾ?" ಎಂದನು.

ಅನಿತೆ ಹೋಗಲೋ ಬೇಡವೋ ಎಂದು ತಟಪಟಾಯಿಸುತ್ತ ಅವನ ಹಿಂದೆಯೆ ಹೋದಳು. ಮನೆ ತಲಪಿದ ಮೇಲೆ ಅವನು ಅನಿತೆಯನ್ನು ಹೊರಗೇ ಇರಲು ಹೇಳಿ, ಒಳಗೆ ತಾಯಿಯ ಹತ್ತಿರ ಹೋಗಿ, "ಅಮ್ಮಾ, ಸಮಯಕ್ಕೆ ನಮ್ಮ ವೈದ್ಯರು ಸಿಗಲಿಲ್ಲ.



ನಗರಕ್ಕೆ ಹೋಗಿದ್ದಾರಂತೆ. ಬೇರೆ ವೈದ್ಯರೂ ಸಿಗಲಿಲ್ಲ. ಅನಿತೆಯನ್ನೇ ಕರಕೊಂಡು ಬಂದೆ. ಅವಳಿಗೆ ವೈದ್ಯವೂ ಗೊತ್ತಿದೆಯಲ್ಲ?" ಎಂದನು.

ತಾಯಿ ಸಂಕಟದಿಂದ ಹಾಹೂ ಎಂದು ನರಳುತ್ತ "ಯಾರೋ ಒಬ್ಬರನ್ನು ಬೇಗ ಕರೆದುಕೊಂಡು ಬಾರೋ. ಈ ನೋವು ನನ್ನ ಪ್ರಾಣ ತೆಗೀತಾ ಇದೆಯೋ!" ಎಂದಳು. "ಅಮ್ಮಾ, ಈ ಮನೆ ಅಂತ ಗೊತ್ತಾದ ಕೂಡಲೆ ಅನಿತೆ ಬರಲಾರೆನೆಂದಳು." ಎಂದು ಸುಳ್ಳು ಹೇಳಿದನು ಮಗ.

"ಯಾಕಂತೇ?" ಎಂದು ತಾಯಿ ಕೂಗಿದಳು. "ನಿಮ್ಮ ಅಮ್ಮನಿಗೆ ಬಂಗಾರವೆಂದರೆ ಪ್ರಾಣ ಅಲ್ಲವೆ? ಅದನ್ನೇ ಇಷ್ಟು ನುಂಗಿ ಪ್ರಾಣ ಉಳಿಸಿ ಕೊಳ್ಳಲಿ ಅಂದಳಮ್ಮಾ" ಎಂದನು ಮಗ.

"ಹೌದೋ ಮಗಾ! ನನ್ನ ಬುದ್ಧಿ ಮಣ್ಣು ತಿಂದಿತು. ಬಂಗಾರಕ್ಕೂ ಸೊಸೆಯ ಬಂಗಾರಕ್ಕಿಂತ ಹೆಚ್ಚಿನ ಸೇವೆಗೂ ವ್ಯತ್ಯಾಸ ತಿಳಿಯದೆ ಹೋಯಿತು.

ಕ್ಷಮೆ ಕೇಳುತ್ತೇನೆಂದು ಹೇಳಿ ಅವಳನ್ನು ಕರೆದು ಕೊಂಡು ಬಾರಪ್ಪಾ" ಎಂದಳು ತಾಯಿ.

ಮಗನು ನಗುತ್ತಾ, ಹೊರಗೆ ಬಂದು ಅನಿತೆಯನ್ನು ಒಳಗೆ ಕರೆದೊಯ್ದನು. ಅವಳು ಒಂದೆರಡು ಪ್ರಶ್ನೆ ಮಾಡಿ ಔಷಧಕೊಟ್ಟಳು. ನಿಮಿಷ ಮಾತ್ರದೊಳಗೆ ಹೊಟ್ಟೇ ನೋವು ಕಡಮೆಯಾಯಿತು. ಅವಳು ಎದ್ದು ಕುಳಿತು ಅನಿತೆಯೊಂದಿಗೆ ಆಪ್ಯಾಯವಾಗಿ, "ನಿನ್ನ ಔಷಧ ಸಂಜೀವಿನಿಯ ಹಾಗೆ ಕೆಲಸಮಾಡಿತು! ಈ ಮೊದಲು ನಡೆದುದನ್ನು ಮರೆತುಬಿಡು. ನಾಳೆಯೇ ನಿಶ್ಚಿತಾರ್ಥಕ್ಕೆ ಬರುತ್ತೇನೆ" ಎಂದಳು.

ಈ ಶುಭವಾರ್ತೆ ಗೆಳತಿಗೆ ಹೇಳ ಬೇಕೆಂದೇ ಅನಿತೆ ಸರಳೆಯ ಬಳಿಗೆ ಓಡಿಬಂದು ರವಿಯನ್ನು ಕಂಡು ಬೆರಗಾಗಿದ್ದಳು. ಅನಿತೆ ಈ ಕತೆಯನ್ನೆಲ್ಲಾ ರವಿಗೆ ಹೇಳಿ, "ನೀವಿಬ್ಬರೂ ತಾಯಿ ಮಗಂದಿರನ್ನು ನೋಡಿ ಸರಳೆ, ನೀವೇ ನನ್ನನ್ನು ಮದುವೆಯಾಗುವ ವರನೂ ವರನ ತಾಯಿಯೂ ಎಂದು ತಪ್ಪಾಗಿ ತಿಳಿದು ಹೀಗೆ ಮಾಡಿದಳು. ಅವಳಲ್ಲಿ ಪರೋಪಕಾರ ಬುದ್ಧಿಯ ಹೊರತು ಸ್ವಾರ್ಥವೇನಿಲ್ಲ." ಎಂದಳು.

ರವಿ ಅನಿತೆಯನ್ನು ಕರೆದುಕೊಂಡು ತನ್ನ ಮನೆಗೆ ಹೋದನು. ಅಲ್ಲಿ ಸರಳೆ ಕೋಣೆಯ ನಡುವೆ ಸಿಕ್ಕಿ ಬಿದ್ದು ಚಿಂತೆಯಿಂದ ಕುಳಿತಿದ್ದಳು. ಅನಿತೆ ಸರಳೆಗೆ ನಡೆದ ಸಮಾಚಾರವನ್ನೆಲ್ಲಾ ಹೇಳಿದಳು. ಸರಳೆ ಸಣ್ಣ ಮುಖ ಮಾಡಿಕೊಂಡು ರವಿ ಮತ್ತು ಅವನ ತಾಯಿಯನ್ನು ನೋಡಿ, "ನನ್ನದು ಅವಸರಬುದ್ಧಿ, ತಪ್ಪಾಯಿತು. ಕ್ಷಮಿಸಿರಿ" ಎಂದಳು.

ರವಿ ಮುಗುಳು ನಕ್ಕು ಸರಳೆಯನ್ನು ನೋಡುತ್ತ, "ನಾನು ಮಾಡಿಕೊಳ್ಳುವ ವಧುವಿಗೆ ಧೈರ್ಯವೂ ಸಾಹಸವೂ ಬೇಕೆಂಬುದು ನನ್ನ ಆಶೆಯಾಗಿತ್ತು. ಅದರೊಂದಿಗೆ ಒಳ್ಳೆಯ ಬುದ್ಧಿವಂತಿಕೆಯೂ ಬೇಕು. ನಿನಗೆ ಇಷ್ಟವಿದ್ದರೆ ಮದುವೆಮಾಡಿಕೊಳ್ಳುತ್ತೇನೆ" ಎಂದನು.

"ನನಗೆ ಸಾಹಸವಿದೆ ನಿಜ. ನಿಮಗೆ ಅದು ಚೂರೂ ಇಲ್ಲವಲ್ಲಾ! ಬಾಗಿಲು ಬಂಧಿಸಿ ಕೇಳಿದ ಕೂಡಲೇ ಕಾಗದ ಬರೆದು ಕೊಟ್ಟ ಪುಕ್ಕರನ್ನು ನಾನು ಹೇಗೆ ಮದುವೆಯಾದೇನು?" ಎಂದಳು ಸರಳೆ.

"ನೀನು ಅನುಭವವಿಲ್ಲದ ಹೊಸ ಕಳ್ಳಿ ಎಂದು ನಿನ್ನ ಪ್ರವರ್ತನೆಯಿಂದ ತಿಳಿದೆ. ನಿನ್ನ ಜತೆಗಾರರಾಗಿ ಎಂತೆಂಥವರಿರುವರೆಂದು ತಿಳಿಯಲಿಕ್ಕಾಗಿ ನೀನು ಹೇಳಿದ ಹಾಗೆಯೇ ಬರೆದುಕೊಟ್ಟೆ. ನಾನು ರಕ್ಷಕಭಟಾಧಿಕಾರಿಯ ಮಗ; ಬರಲಿರುವ ರಕ್ಷಕ ಭಟಾಧಿಕಾರಿ" ಎಂದನು ರವಿ.

"ಇನ್ನೇನು? ಇಬ್ಬರೂ ಒಂದೇ ಬಗೆಯವರು ಅಂತಾಯ್ತು! ನನ್ನ ಗೆಳತಿಗೂ ನನಗೂ ಒಂದೇ ಮುಹೂರ್ತದಲ್ಲಿ ಆಗ ಬೇಕಾದ್ದೇ ಆಗುತ್ತೆ" ಎಂದು ಅನಿತೆ ಹೇಳುವಾಗ ಸರಳೆ ತಲೆ ತಗ್ಗಿಸಿದಳು.






## ೫

[ಮಂದರದೇವನು ಶಿವದತ್ತನ ಪರಿಚಯಮಾಡಿಕೊಂಡು, ಕುಂಡಲಿನೀದ್ವೀಪರಾಜ್ಯದ ವಿವರಗಳನ್ನು ತಿಳಿಯುತ್ತಿದ್ದನು. ಆ ರಾಜ್ಯಕ್ಕೆ ಅಪರಿಮಿತವಾಗಿ ಧನದ ರಾಶಿಯನ್ನೇ ತಂದು ಹಾಕಿದುದರಿಂದಲೇ ವಿಪರೀತವಾಯಿತೆಂದೂ ರಾಜನು ವಿನೋದ ಕಾಲಕ್ಷೇಪದಲ್ಲಿದ್ದುದರಿಂದ ದೇಶವು ಅರಾಜಕವಾಗಿ, ಶತ್ರುಗಳು ಮುತ್ತುವಾಗ ಸೇನಾನಾಯಕತ್ವವು ನರವಾಹನಮಿಶ್ರನಿಗೆ ಸಿಗುವಂತಾಯಿತೆಂದೂ ಹೇಳುತ್ತಿದ್ದನು.]

ಶಿವದತ್ತನು ಹೇಳುವ ಸಂಗತಿಗಳನ್ನು ಶ್ರದ್ಧೆಯಿಂದಲೂ, ಆಸಕ್ತಿಯಿಂದಲೂ ಕೇಳುತ್ತಲಿದ್ದ ಮಂದರದೇವನಿಗೆ, ಕೇಳುತ್ತಿದ್ದಂತೆ ಕ್ಷಣ ಕ್ಷಣಕ್ಕೂ ಆಶ್ಚರ್ಯವು ಅಧಿಕವಾಗುತ್ತಿತ್ತು, ಸಂಭಾಷಣೆಯ ಗುಂಗಿನಲ್ಲಿ ತಮ್ಮ ದೋಣಿಗಳು ಯಾವ ಕಡೆಗೆ ಹೋಗುತ್ತಿರುವುದೆಂದೂ ಅವನಿಗೆ ಗೊತ್ತಾಗಲಿಲ್ಲ. ಆವನು ಅತ್ಯಾತುರದಿಂದ ಶಿವದತ್ತನ ಮಾತಿಗೆ ಅಡ್ಡ ಬಂದು, "ಅಲ್ಲ ಶಿವದತ್ತರೇ, ಸೇನಾನಾಯಕತ್ವವು ದುಷ್ಟನಾದ ನರವಾಹನ ಮಿಶ್ರನಿಗೆ ಸಿಗದಂತೆ ಮಾಡಲು ನಿಮಗಾರಿಗೂ ಸಾಧ್ಯವಾಗದೆ ಹೋಯಿತೇ? ಸ್ವತಃ ನೀವೇ ಸೇನಾನಾಯಕತ್ವವನ್ನು ವಹಿಸಿಕೊಳ್ಳುತ್ತಿದ್ದರೆ ಸರಿಯಾಗಿ ಬಿಡುತಿತ್ತಷ್ಟೆ?" ಎಂದು ಕೇಳಿದನು.

ಮಂದರದೇವನ ಮಾತು ಕೇಳಿ ಶಿವದತ್ತನು ನಕ್ಕು, "ಆ ದಿನಗಳ ಪರಿಸ್ಥಿತಿಯಲ್ಲಿ ಅದು ಅಷ್ಟು ಸುಲಭಸಾಧ್ಯವಾಗಿರಲಿಲ್ಲ. ನಾನಾಗಿ ಬಾಯಿ ತೆರೆದು ನನಗೆ ಸೇನಾನಾಯಕತ್ವ ಕೊಡಬೇಕೆಂದು ಕೇಳುವುದು ಸರಿಯಾಗಿರದಷ್ಟೆ? ಅದು ಏನೇನೋ ಅಪಾರ್ಥಗಳಿಗೆ ದಾರಿಯಾಗಬಹುದು. ಹಾಗೆಂದು ಸುಮ್ಮನಿರುವುದರಿಂದ ಸೇನಾನಾಯಕತ್ವವು ದುಷ್ಟನೊಬ್ಬನಿಗೆ

ಸಿಗಲು ಬಿಡುವುದೂ ಶ್ರೇಯಸ್ಕರವಲ್ಲವೆಂಬುದೂ ತಿಳಿದಿರುವ ನಿಜವೇ. ಅದಕ್ಕೆ ಮಾರ್ಗಾಂತರವೇನೆಂದು ನಾನು ತೀವ್ರವಾಗಿ ಆಲೋಚಿಸಲು ತೊಡಗಿದೆನು. ನನ್ನ ಆಲೋಚನೆಯನ್ನು ಕಂಡುಹಿಡಿದು ಸಮರ ಸೇನನು, 'ಏನು ಆಲೋಚನೆ ಮಾಡುವ ಹಾಗಿದೆ ಯಲ್ಲಾ ಶಿವವಾತ್ಸಾ? ಸಂಕೋಚಪಡದೆ ನನಗೂ ಸ್ವಲ್ಪ ಹೇಳು' ಎಂದನು.

ಅವನಾಗಿ ಕೇಳಿದ್ದು ಒಳ್ಳೇದೆನಿಸಿ ನಾನು ಅವ ನೊಡನೆ ಹೀಗೆ ಹೇಳಿದೆ: 'ಸಮರಸೇನಾ, ಈಗಿನ ಪರಿಸ್ಥಿತಿಯಲ್ಲಿ ನೀನೇ ಸೇನೆಗಳಿಗೆಲ್ಲಾ ನಾಯಕನಾಗ ಬೇಕಾದುದು ಒಳ್ಳೆಯದೆಂದು ನನ್ನ ಆಲೋಚನೆ. ಶತ್ರುಗಳು ಕಳುಹಿಸಿದ ಎಚ್ಚರಿಕೆಯ ಸಂದೇಶವನ್ನು ಹಿಡಿದು ನೋಡುವಾಗ, ಅವರ ಬಲದಲ್ಲಿ ಅವರಿಗಿರುವ ದೃಢನಂಬುಗೆ ವ್ಯಕ್ತವಾಗುತ್ತದೆ. ಆದುದರಿಂದ ಸುಲಭದಲ್ಲಿ ಹೊಡೆದು ಹಾಕುವ ವಿಷಯವಲ್ಲ ಇದು. ದುರದೃಷ್ಟವಶಾತ್ತಾಗಿ ನಮ್ಮ ಸೈನ್ಯವು ಶತ್ರುಗಳಿಂದ ಚಿಕ್ಕ ಪೆಟ್ಟನ್ನು ತಿಂದರೂ, ಅದು ಬೇರೆ ಕೆಲವು ಶತ್ರು ಗಳು ನಮ್ಮ ಮೇಲೆ ಧ್ವಜ ಎತ್ತಲು ಉತ್ಸಾಹಬರು ವಂತಾಗುತ್ತದೆ. ನಮ್ಮ ಸೈನ್ಯಗಳ ಬಲಕ್ಕೂ ವಿಸ್ಮೃತಿ ಯುಂಟಾಗುತ್ತದೆ. ಆದುದರಿಂದ ಇದನ್ನೆಲ್ಲ ಮನದಂದು ನೋಡುವಾಗ, ಕಷ್ಟವನ್ನು ತಡೆದು ಹಿಂದೂಡ ಬೇಕಾಗಿದೆ. ನೀನೇ ಸೇನಾನಾಯಕ ನಾಗುವುದು ಒಳ್ಳೆಯದು'.

ನನ್ನ ಮಾತು ಸಮರಸೇನನಿಗೆ ಒಪ್ಪಿಗೆಯಾಯಿತು. 'ಹೌದು. ನಿಜವೇ. ಹಾಗೆಯೇ ಮಾಡುತ್ತೇನೆ.' ಎಂದು ತಲೆಯಾಡಿಸಿದನು ಗಂಭೀರವಾಗಿ.

ಅಷ್ಟರಲ್ಲಿ ಆ ಸ್ಥಳಕ್ಕೆ ನರವಾಹನ ಮಿಶ್ರನು ಬಂದನು. ಅವನನ್ನು ನೋಡಿದ ಕೂಡಲೇ ಸಮರ ಸೇನನು, 'ನೆನೆಯುವಾಗಲೇ ಬಂದೆ ನರವಾಹನಾ! ನಿನಗಾಗಿ ಹೇಳಿ ಕಳುಹಿಸಬೇಕೆಂದಿದ್ದೆ. ನೀನೀಗ ಕೂಡಲೇ ಹೋಗಿ ಸೇನೆಗಳನ್ನೆಲ್ಲ ಒಟ್ಟು ಕೂಡಿಸ ಬೇಕು. ಒಂದು ಗಂಟೆ ಅವಧಿಯೊಳಗೆ ಎರಡು ಸಾವಿರಮಂದಿ ಸೈನಿಕರು ಸಮಾವೇಶವಾಗುವಂತೆ ಮಾಡಬೇಕು. ಸೂರ್ಯನು ಮುಳುಗುವುದರೊಳಗೆ



ಶತ್ರುಶೇಷವಿಲ್ಲದಂತೆ ಮಾಡಬೇಕಾಗಿದೆ. ತ್ವರೆಮಾಡು!' ಎಂದನು. ನರವಾಹನ ಮಿಶ್ರನು ಮಾತಾಡದೆ ಅಲ್ಲಿಂದ ಹೋಗುವಾಗ, ನನ್ನ ಕಡೆಗೆ ನೋಡಿ ಸಣ್ಣದೊಂದು ನಗುವನ್ನು ನಕ್ಕನು. ಆ ನಗುವಿನಲ್ಲಿ ಏನೋ ಒಂದು ವಿಷಯವಿರುವಂತೆ ನನಗೆ ಭಾಸವಾಯಿತು. ಅದು ಎಂತಹ ಭಯಂಕರ ಕಾಲಕೂಟವಿಷವೆಂದು ಆಗ ತಿಳಿಯುತ್ತಿದ್ದರೆ ನಡೆಯುವ ಕತೆ ಬೇರೆಯಾಗುತ್ತಿತ್ತು. ಈ ದೇಶಕ್ಕೆ ಹೀಗೆಯೇ ಆಗಬೇಕೆಂದು ವಿಧಿಯಿರುವಾಗ ತಪ್ಪಿಸಲು ಯಾರಿಂದ ಸಾಧ್ಯ ?

ಅವನು ಹೋದಕೂಡಲೇ ಸಮರಸೇನನು ನನ್ನನ್ನು ನೋಡಿ, 'ಶಿವದತ್ತಾ, ನೀನು ಕೂಡಾ ನಿನ್ನ ಅನುಚರರನ್ನು ಒಟ್ಟು ಗೂಡಿಸಬೇಕು. ಸಮಯ ಹೇಗೆ ಬರುವುದೆಂದು ಹೇಳಲಾಗುವುದಿಲ್ಲ. ಯಾವುದಕ್ಕೂ ನಿನ್ನವರು ಬೆಂಬಲವಾಗಿರುವುದು ಒಳ್ಳೇದು, ಕಡೇ ಪಕ್ಷ ಬಹಳ ಕಾಲದಿಂದ ಕೆಲಸವಿಲ್ಲದ ಕತ್ತಿಗಳಿಗೆ ಹಿಡಿದ ತುಕ್ಕನ್ನಾದರೂ ಕಳೆದುಕೊಳ್ಳಬಹುದು' ಎಂದು ಸ್ವಲ್ಪ ನಕ್ಕನು.

ನನ್ನ ಅನುಚರರಲ್ಲಿ ಮಿಂಚಿನ ವೇಗದವರಾದ ಇಪ್ಪತ್ತೈದು ಮಂದಿಗಳನು ಆರಿಸಿ ಸರ್ವಸನ್ನದ್ಧ ಮಾಡಿಟ್ಟೆನು. ಆಗ ನನಗೂ ಒಂದು ಹೊಸ ಉತ್ಸಾಹ ಬಂದಂತಾಗಿತ್ತು. ಮಹಾ ಸೇನಾಧಿಪತಿಯಾದ ಸಮರಸೇನನ ಕೈಕೆಳಗೆ ಶತ್ರುಗಳೊಂದಿಗೆ ಹೋರಾಡಿ ಬಹಳ ಕಾಲವಾಗಿತ್ತು. ಮತ್ತೆ ಅಂತಹ ಅವಕಾಶ ಬರಲಿರುವ ಸಂಗತಿ ನನಗೆ ತುಂಬ ಸಂತೋಷದಾಯಕವಾಗಿತ್ತು.

ಹೀಗೆ ಒಂದು ಗಂಟೆ ಹೊತ್ತು ಕಳೆದಿರಬಹುದು. ನರವಾಹನ ಮಿಶ್ರನು ಸೈನ್ಯವನ್ನೆಲ್ಲ ಒಟ್ಟುಸೇರಿಸಿ, ಒಳ್ಳೆಯ ವಾರ್ತೆಯೊಂದಿಗೆ ಬರುತ್ತಾನೆಂದು ನಾವು ನಿರೀಕ್ಷಿಸಿಕೊಂಡಿದ್ದೆವು. ಅವನು ಹೋಗಿ ಒಂದು ಗಂಟೆಯಾಗಲು ಇನ್ನು ಸ್ವಲ್ಪ ಹೊತ್ತು ಮಾತ್ರ ಉಳಿದಿತ್ತು. ಒಂದು ಗಂಟೆ ಕಳೆದು ಮತ್ತೆ ತುಸು ಹೊತ್ತಾದ ಮೇಲೆ ನರವಾಹನ ಮಿಶ್ರನು ತೇಕುತ್ತ ಉಬ್ಬಸ ಬಿಡುತ್ತ ಮುಗ್ಗರಿಸುತ್ತ ಬರುವುದನ್ನು ನೋಡಿ ನಾವಿಬ್ಬರೂ ತಬ್ಬಿಬ್ಬಾದೆವು. ಅವನ





ಒರೆಯಲ್ಲಿ ಕತ್ತಿಯೇ ಇರಲಿಲ್ಲ. ಧರಿಸಿದ ದುಸ್ತು ಅಲ್ಲಲ್ಲಿ ಹರಿದಿದ್ದಿತು. ತಲೆಗೂದಲು ಕೆದರಿ ಹೋಗಿತ್ತು. ಮುಖದಲ್ಲಿ ಕೆಲವಾರು ಚಿಕ್ಕಚಿಕ್ಕ ಗಾಯಗಳು ಕೆಂಪಗೆ ರಕ್ತ ಒಡೆದು ಕಾಣುತ್ತಿದ್ದುವು. ಮನುಷ್ಯನು ತುಂಬ ಹೆದರಿದವನ ಹಾಗೆ ಕಾಣುತ್ತಿದ್ದನು. ನಮಗೆ ಗಾಬರಿಯಾಯಿತು.

'ಏನಿದು ನರವಾಹನಾ ! ಏನಾಯಿತು ? ಹೀಗೆ ಬಂದಿರುವೆಯಲ್ಲಾ ?' ಎಂದು ಸಮರಸೇನನು ಬಹಳ ಆತುರದಿಂದ ಅವನನ್ನು ಕೇಳಿದನು.

ನರವಾಹನ ಮಿಶ್ರನು ಮಾತಾಡಲು ಪ್ರಯತ್ನ ಪಟ್ಟನಾದರೂ ಥಕ್ಕನೆ ಅವನ ಗಂಟಲು ಒಡೆಯಲಿಲ್ಲ. ನಾಲಗೆಯಿಂದ ತುಟಿಯೊರೆಸಿಕೊಂಡು ಗಂಟಲು ಕೆನೆದು, 'ಪರಿಸ್ಥಿತಿ ಕೆಟ್ಟಿತು. ಎಲ್ಲಾ ನಮ್ಮ ಕೈಜಾರಿ ಹೋಯಿತು. ನಾವು ಯಾವುದಾದರೂ ಸುರಕ್ಷಿತ ಪ್ರದೇಶಕ್ಕೆ ಓಡಿಬಿಡುವುದು ಒಳ್ಳೇದು' ಎಂದನು ತಡವರಿಸುತ್ತಾ.

ಆ ಮಾತುಗಳನ್ನು ಕೇಳಿ ಸಮರಸೇನನು ಬಾಲ ತುಳಿತ ಹಾವಿನಂತೆ ಎದೆ ಸೆಟೆಸಿ ತಲೆಯೆತ್ತಿ ಕಣ್ಣ ರಳಿಸಿ ನಿಂತನು. ಅವನಲ್ಲಿ ಹಿಂದೆಂದೂ ಬಾರದಿರುವ ಅವಸರವೂ ಕೋಪೋದ್ರೇಕವೂ ಈಗ ಬಂದಿತ್ತು.

'ಏನು ಹೇಳಿದೆ ? ನಮ್ಮ ರಾಜ್ಯದಲ್ಲೇ ನಾವು ಸುರಕ್ಷಿತ ಪ್ರದೇಶಕ್ಕೆ ಓಡಿ ಹೋಗುವುದೆ ? ಈ ಕುಂಡಲಿನೀ ದ್ವೀಪದ ಪ್ರತಿಯೊಂದು ಅಂಗುಲ ನೆಲವೂ ನಮಗೆ ರಕ್ಷಣೆ ಕೊಡುವಂಥಾದ್ದೇ. ನಿನಗೇನಾದರೂ ಬುದ್ಧಿಗಿದ್ಧಿ ಕೆಡಲಿಲ್ಲವಷ್ಟೆ ? ಪಲಾಯನ ಸೂತ್ರ ಹೇಳುವ ನೀನು ಸರಿಯಾದ ಬೋದದಲ್ಲೇ ಇರುವೆಯಾ ?' ಎಂದನು ಸಮರಸೇನ.

ಸಮರಸೇನನ ಭಾವಾವೇಗವನ್ನು ನೋಡಿ ನರವಾಹನ ಮಿಶ್ರನು ಹೆದರಿ ನಡುಗ ತೊಡಗಿದನು. ಅವನು ಮತ್ತೇನೋ ಹೇಳಲು ಪ್ರಯತ್ನಿಸುವಾಗ ಕೋಟೆಯ ಮುಖದ್ವಾರದ ಕಡೆಯಿಂದ ಭಯಂಕರವಾದ ಕೋಲಾಹಲ ಶಬ್ದ ಕೇಳತೊಡಗಿತು. ತುಫಾನಿಗೆ ಮಹಾವೃಕ್ಷಗಳು ನಡುಗುವಂತೆ ನಾವು ಹೆದರಿ ನಡುಗಿದೆವು.

'ಅಲ್ಲೇನು ಹಾಗೆ ಶಬ್ದ ? ಬೇಗ ಹೇಳು !' ಎಂದು ಸಮರಸೇನನು ಗರ್ಜಿಸಿ ಕೇಳಿದನು.

'ಸಮರಸೇನಾ ಅದನ್ನೇ ಹೇಳ ಬೇಕೆಂದು ಬಂದೆನು. ಹೇಳಲಾಗದಂಥ ಭಯಂಕರವಾದ ವಾರ್ತೆ. ಸೈನಿಕರೆಲ್ಲಾ ಒಮ್ಮೆಗೇ ಬಂಡಾಯವೆದ್ದು ಪ್ರಜೆಗಳೊಂದಿಗೆ ಕೂಡಿ ಹೋದರು. ರಾಜನನ್ನು ಗದ್ದುಗೆಯಿಂದ ಇಳಿಸಬೇಕು ಎಂದು ಕೂಗುತ್ತಾ ಬೀದಿಯಲ್ಲಿ ಮೆರೆವಣಿಕೆ ಮಾಡುತ್ತಿದ್ದಾರೆ. ನಾನು ಸಾಧ್ಯವಾದಷ್ಟು ಸಮಾಧಾನ ಹೇಳುತ್ತ ಸೈನಿಕರನ್ನು ಒಂದುಗೂಡಿಸಲು ಪ್ರಯತ್ನಮಾಡಿದೆ. ಆಗ ನನಗೆ ಅವರು ಮಾಡಿದ ಬಹುಮಾನವಿದು. ನನ್ನನ್ನು ಹಿಡಿದು ಹೊಡೆದು ಇರುವುದನ್ನೆಲ್ಲ ಕಿತ್ತು ದೂಡಿದರು. ಜೀವದಿಂದುಳಿದು ಬದುಕಿ ಬಂದದ್ದು ಕುಂಡಲಿನೀ



ದೇವಿಯ ದಯೆ' ಎಂದನು ನರವಾಹನ ಮಿಶ್ರ. ಆ ಮಾತುಗಳನ್ನು ಕೇಳಿ ಸಮರಸೇನನು ತಲೆಯ ಮೇಲೆ ಸಿಡಿಲು ಬಿದ್ದವನ ಹಾಗೆ ನಿರ್ವಿಣ್ಣನಾದನು. ಯಾರಿಗಾಗಿ ಎಲ್ಲವನ್ನೂ ತ್ಯಜಿಸಿ, ಸಾಹಸ ಮಾಡಿ ಮಂತ್ರಗಳ ದ್ವೀಪದಲ್ಲಿ ದೊಡ್ಡ ದೊಡ್ಡ ಕಷ್ಟ ಕೋಟಲೆಗಳಿಗೆ ಒಳಗಾದನೋ, ಆ ಪ್ರಜೆಗಳೇ ಕಷ್ಟಕಾಲದಲ್ಲಿ ಹೀಗೆ ನಿರಾಕರಣೆ ತೋರಿ ತಿರುಗಿ ಬೀಳುವರೆಂಬುದನ್ನು ತಿಳಿದು ಸಮರಸೇನನು ಹತಾಶನಾದನು. ಪಾಪ, ಆವನಿಗೆ ಈ ನಡುವಿನ ಕಾಲದಲ್ಲಿ ನಡೆದ ಬದಲಾವಣೆಗಳೂ, ಅದರಲ್ಲಿ ದುಷ್ಟನೂ, ಕುತಂತ್ರಿಯೂ ಆದ ನರವಾಹನ ಮಿಶ್ರನ ಕುಟಿಲ ಪಾತ್ರವೂ ಎಷ್ಟರ ಮಟ್ಟಿಗಿತ್ತೆಂಬುದೊಂದೂ ತಿಳಿಯದು.

ಸಮರಸೇನನು ದೊಡ್ಡದೊಂದು ನಿಟ್ಟುಸಿರು ಬಿಟ್ಟು, 'ಶಿವದತ್ತಾ, ನಾನು ಅಧೈರ್ಯ ಪಟ್ಟೆನೆಂದು ಕೊಂಡು ಹೆದರಬೇಡ. ನನ್ನ ಮೇಲೆ ಎಷ್ಟೋ ಅಭಿಮಾನವಿಟ್ಟಿರುವ ಪ್ರಜೆಗಳು, ಇಷ್ಟೊಂದು ಕೃತಘ್ನರಾಗಿ ವರ್ತಿಸುವರೆಂದು ಕೇಳಿ ನಂಬಲಾಗದೆ, ಮೋಸಹೋದಂತಾಯಿತು. ಈ ವಿಶ್ವಾಸ ಘಾತದಿಂದ ಭಗ್ಗನೆ ಕೋಪದುರಿ ಎದ್ದಿತೇ ಹೊರತು ಹೆದರಿದೆನೆಂದು ತಿಳಿಯಬೇಡ' ಎಂದನು.

ಅವನಿಗೆ ಏನು ಹೇಳಿ ಸಮಾಧಾನ ಪಡಿಸುವು ದೆಂದು ನನಗೆ ಗೊತ್ತಾಗಲಿಲ್ಲ. ನರವಾಹನ ಮಿಶ್ರನ ಕಡೆಗೆ ನೋಡಿದೆ. ಆವನು ಕಟ್ಟಿಗೆಯ ಮೂರ್ತಿಯ ಹಾಗೆ ನಿಂತು ಬಿಟ್ಟಿದ್ದನು. ಕೋಟೆಯ ದ್ವಾರದ ಹತ್ತಿರ ಇನ್ನಿಷ್ಟು ಜೋರುಜೋರಾದ ಧ್ವನಿಗಳೂ ಜಯಘೋಷಗಳೂ ಕೇಳಬರುತ್ತಿದ್ದವು. ಅಷ್ಟರಲ್ಲಿ ದ್ವಾರಪಾಲಕನೊಬ್ಬನು ಗಾಬರಿಯಿಂದ ಓಡುತ್ತಾ ನಮ್ಮ ಹತ್ತಿರ ಬಂದನು. ಏನು ಸಂಗತಿಯೆಂದು ಅವನನ್ನು ನಾನು ಕೇಳುವುದರೊಳಗೇ ಅವನೇ ಹೇಳಿದನು :

'ಮಹಾಸೇನಾನೀ ದೊರೆಗಳೇ! ಅಪಾಯ! ಭಾರೀ ಅಪಾಯ! ಪ್ರಜೆಗಳು ಕೋಟೆಯ ದ್ವಾರ ವನ್ನು ಬಡೆಯುತ್ತಾ ಇದ್ದಾರೆ. ಇನ್ನು ಬಹಳ ಹೊತ್ತುನಿಲ್ಲಲಾರದು' ಎಂದನು.

ಸಮರಸೇನನು ಒಂದು ಕ್ಷಣ ಸ್ತಬ್ಧನಾದನು. ಅವನ ಕಣ್ಣುಗಳು ದ್ವಾರಪಾಲಕನ ಮೇಲೆಯೇ ಇದ್ದರೂ, ಮನಸ್ಸು ಎಲ್ಲಿಯೋ ಇದ್ದುದರಿಂದ ಏನೂ ಹೇಳಲಿಲ್ಲ, ನಾನು, ಒಂದು ಗಟ್ಟಿ ನಿಶ್ಚಯ ಮಾಡಿ, 'ಎಲೋ, ಓಡಿಹೋಗಿ ಮೃಗಶಾಲೆಯ ನಾಯಕನನ್ನು ನಿಂತಕಾಲ ಮೇಲೆ ಇಲ್ಲಿಗೆ ಕರೆದುಕೊಂಡು ಬಾ. ಬೇಗಬರಲಿ!' ಎಂದು ಹೇಳಿ ಆ ದ್ವಾರಪಾಲಕನನ್ನು ಓಡಿಸಿದೆನು.

ತಡಮಾಡದೆ ಮೃಗಶಾಲಾಧಿಪತಿ ಓಡೋಡಿ ಅಲ್ಲಿಗೆ ಬಂದನು. ಅವನು ಬಂದ ಕೂಡಲೇ ನಾನು ಅವನನ್ನು ನೋಡಿ, 'ನನ್ನ ಆಜ್ಞೆ ಕೂಡಲೇ



ನೆರವೇರಿಸು. ನಿನ್ನ ಸ್ವಾಧೀನದಲ್ಲಿರುವ ಎಲ್ಲಾ ಕ್ರೂರಮೃಗಗಳನ್ನೂ ಬೋನುಗಳಿಂದ ಹೊರಗೆ ಬಿಟ್ಟುಬಿಡು. ಬಿಡುವ ಮೊದಲು, ಆ ಮೃಗಗಳು ರಾಜ ಪ್ರಾಸಾದದ ಪ್ರಾಂಗಣದಲ್ಲಿ ಕೋಟೆಯ ಮುಖದ್ವಾರದ ಹತ್ತಿರವೇ ಇರುವಂತೆ ಉಳಿದ ಭಾಗಗಳನ್ನು ಬಂದು ಮಾಡಿ ಬಿಡಬೇಕು. ಅಗತ್ಯ ಬಿದ್ದಾಗ ಅವುಗಳನ್ನು ಮತ್ತೆ ಬೋನಿನೊಳಗೆ ಸೇರಿಸಲು ತಕ್ಕ ಹಾಗೆ ನಿನ್ನ ನೌಕರರಿಗೆ ಹೇಳಿ, ಅವರೆಲ್ಲರನ್ನೂ ಸಿದ್ಧಗೊಳಿಸಿಡು' ಎಂದು ಆಜ್ಞೆ ಮಾಡಿದೆನು.

ಮೃಗಶಾಲೆಯ ನಾಯಕ ಆ ಮಾತು ಕೇಳಿ ಬೆಕ್ಕಸ ಬೆರಗಾಗಿ ಸಮರಸೇನನನ್ನೇ ಪ್ರಶ್ನಾರ್ಥಕವಾಗಿ ನೋಡಿದನು. ಸಮರಸೇನನು ಅವನನ್ನು ನೋಡಿ, 'ಸಂದೇಹಿಸಬೇಡ, ಶಿವದತ್ತರ ಆಜ್ಞೆಗಳೆಲ್ಲವೂ ನನ್ನ ಆಜ್ಞೆ ಎಂದೇ ತಿಳಿ, ಬೇಗ ಮಾಡು ಆ ಕೆಲಸ' ಎಂದನು.

'ಆದರೆ ದೊರಗಳೇ. ಒಂದುಸಾರಿ ಆ ಕ್ರೂರ ಮೃಗಗಳನ್ನು ಬಿಟ್ಟುಬಿಟ್ಟರೆ ಹೊರಗಿರುವ ಪ್ರಜೆಗಳ ಮೇಲೆ—' ಎಂದು ಮೃಗಶಾಲೆಯವನು ಏನೋ ಹೇಳಲು ನೋಡಿದನು.

ಆಗ ನಾನು ಕೋಪದಿಂದ 'ಆ ವಿಚಾರ ನಿನಗೆ ಆಗತ್ಯವಿಲ್ಲ. ಕೋಟೆಯ ದ್ವಾರಗಳನ್ನು ಒಡೆದು ಹಾಕಿದರೆ ಏನಾಗುತ್ತದೆಂದು ಮುಂದಾಗಿ ಅವರಿಗೆ ತಿಳಿಯುವುದು ಒಳ್ಳೆಯದು. ನೀನು ಸಂದೇಹಿಸುತ್ತಾ ಹೊತ್ತು ಕಳೆಯದೆ, ನಿಶ್ಚಿಂತೆಯಿಂದ ಹೋಗಿ ಹೇಳಿದ ಕೆಲಸ ಮಾಡು' ಎಂದನು.

ಮೃಗಶಾಲಾಧಿಪತಿ ಕೂಡಲೇ ಹೊರಟು ಹೋದನು. ನಾನು ನರವಾಹನ ಮಿಶ್ರನನ್ನು ನೋಡಿದೆನು. ಅವನು ಹಲ್ಲು ಬಿಗಿದು ನನ್ನನ್ನು ಕೋಪದಿಂದ ಕದ್ದುಕದ್ದು ನೋಡುವಂತೆ ಕಂಡಿತು. ಅದೇಕೆ ಅವನಿಗೆ ನನ್ನ ಮೇಲೆ ಕೋಪ? ಅವನ ಎತ್ತುಗಡೆ ಏನಿರ ಬಹುದು? ಈ ಸೈನಿಕರ ಹಾಗು ಪ್ರಜೆಗಳ ಬಂಡಾಯದಲ್ಲಿ ಅವನ ಪಾತ್ರ ಎಷ್ಟರ ಮಟ್ಟಿಗಿದೆ? ಇಂತಹ ಪ್ರಶ್ನೆಗಳಿಗೆ ಆಗ ನನಗೇನೂ ಉತ್ತರ ಸಿಗಲಿಲ್ಲ.

ಸುಮಾರು ಅರ್ಧ ಗಂಟೆಯ ಮೇಲೆ ಒಮ್ಮಿಂದೊಮ್ಮೆಗೇ ಭಯಂಕರವಾದ ಹುಲಿಸಿಂಹಗಳ ಗರ್ಜನೆಗಳೂ, ಆನೆಗಳ ಘೀಂಕಾರಗಳೂ ಕೇಳತೊಡಗಿದುವು. ಕೋಟೆಯ ಪ್ರಾಂಗಣವೆಲ್ಲಾ ಕ್ರೂರ ಮೃಗಗಳ ಕೂಗಾಟ ಆರ್ಭಾಟಗಳಿಂದ ಪ್ರತಿಧ್ವನಿಸ ತೊಡಗಿತು.

ಸಮರಸೇನನು ಥಕ್ಕನೆ ಹೊರಟು ಭವನದ ಮುಂಭಾಗದ ಎತ್ತರವಾದ ಮಂಟಪದ ಮಾಳಿಗೆಯ ಮೇಲೆ ಹೋದನು. ಅಲ್ಲಿ ನಿಂತು ನೋಡಿದರೆ, ರಾಜ ಭವನದ ಮುಂಭಾಗದ ಖಾಲೀ ಪ್ರದೇಶವೂ, ಮುಖದ್ವಾರಕ್ಕಿರುವ ಕಬ್ಬಿಣದ ಕಟಾಂಜನಗಳೂ ಕೋಟೆಯ ಹತ್ತಿರ ಹೊರಗೆ ಬಲಾತ್ಕಾರದಲ್ಲಿ ಮಗ್ನ

ರಾಗಿರುವ ಪ್ರಜೆಗಳೂ ಎಲ್ಲವೂ ಕಾಣುತ್ತಿದ್ದುವು. ಸಮರಸೇನನ ಹಿಂದೆಯೇ ನಾನೂ ಹೋಗಿ ಆ ಮಂಟಪದ ತಲೆಯ ಮೇಲೆ ನಿಂತೆನು. ಬೋನಿನೊಳಗಿನಿಂದ ಬಿಡಲ್ಪಟ್ಟ ಕ್ರೂರಮೃಗಗಳು, ಪ್ರಾಂಗಣದೊಳಗೆಲ್ಲಾ ಸ್ವೇಚ್ಛೆಯಾಗಿ ಓಡಾಡುತ್ತ ಗರ್ಜಿಸುತ್ತಿದ್ದುವು. ಒಂದರಮೇಲೊಂದು ಸಿಟ್ಟಿಗೆದ್ದು ಬೀಳುತ್ತಿದ್ದುವು. ಮುಖದ್ವಾರದ ಕಟಾಂಜನಗಳ ಹಿಂದಿರುವ ಜನರನ್ನು ನೋಡಿ, ಹಲ್ಲುಗಳನ್ನೂ, ಪಂಜಾಗಳನ್ನೂ ತೋರಿಸಿ ಹೆದರಿಸುತ್ತಿದ್ದುವು.

'ಬಹಳ ಒಳ್ಳೇ ಯೋಚನೆ ತೋರಿತು ನಿನಗೆ ಶಿವದತ್ತಾ!' ಎಂದು ಸಮರಸೇನನು ನನ್ನನ್ನು ನೋಡಿ ಮುಗುಳು ನಕ್ಕನು. ನಾನು ಹೌದೆಂದು ತಲೆಯಾಡಿಸಿದೆ.

ಈಗ ಏನೋ ಈ ಕ್ರೂರ ಮೃಗಗಳ ಭಯವೇ ಕೋಟೆಯ ದ್ವಾರವನ್ನು ಒಡೆಯದಂತೆ ಅವರನ್ನು ತಡೆದಿದೆ. ಎಲ್ಲರೂ ದೂರ ದೂರ ಸರಿದು ಮೇಲೆ ಕೆಳಗೆ ನೋಡುತ್ತ ಎಡತಾಕುತಿದ್ದಾರೆ. ಆದರೆ ಇದು ಬೀಸುವ ದೊಣ್ಣೆಯ ಏಟು ತಪ್ಪಿಸಿಕೊಳ್ಳುವ ಹಾಗೆ ತಾತ್ಕಾಲಿಕವೇ ಆಯಿತು. ಏನೋ ಸ್ವಲ್ಪ ನಮಗೆ ಶ್ವಾಸಬಿಡುವಷ್ಟು ಆಸ್ಪದವಾಗಿದೆ, ಅಷ್ಟೇ. ಇಷ್ಟೊಂದು ಅರಾಜಕತನವನ್ನು ಹುರುಪುಗೊಳಿಸಿದ ನಾಯಕನೊಬ್ಬನು ಇರಲೇಬೇಕಷ್ಟೆ? ಅವನು ಯಾರೆಂಬುದೇ ಗೊತ್ತಾಗಲಿಲ್ಲ. ಎಲ್ಲವೂ ಅಯೋಮಯವಾಗಿರುವ ಹಾಗೆ ಕಾಣುತ್ತದೆ. ಏನಾದರೂ ಇದಕ್ಕೆ ಒಬ್ಬನೋ ಇಬ್ಬರೋ ನಾಯಕರು ಇರಲೇಬೇಕು.' ಎಂದು ಸಮರಸೇನನು ಹಿಂದಿರುಗಿ ನೋಡಿದನು. ನರವಾಹನಮಿಶ್ರನು ನಮ್ಮ ಹಿಂದೆ ಸ್ವಲ್ಪ ದೂರದಲ್ಲಿ ಕೈಕಟ್ಟಿಕೊಂಡು ನಿಂತಿದ್ದನು.

ಸಮರಸೇನನು ನೋಡಿದ ಕೂಡಲೇ ಅವನು ಹತ್ತಿರ ಬಂದು, 'ಸಮರಸೇನಾ, ಪ್ರಜೆಗಳೇನೋ ಗುಂಪುಕಟ್ಟಿಕೊಂಡು ಮಹಾರಾಜರನ್ನು ಪದವೀಚ್ಯುತ ಮಾಡಬೇಕೆಂದು ತೀವ್ರವಾಗಿ ಹಟಹಿಡಿದಿದ್ದಾರೆ. ಯಾರು ಅವರ ನಾಯಕನೋ ಗೊತ್ತೇ ಆಗಿಲ್ಲ! ಅದೇ ದೊಡ್ಡ ಆಶ್ಚರ್ಯ!' ಎಂದನು.

ಸಮರಸೇನನು ಸ್ವಲ್ಪ ತಲೆದೂಗಿ, 'ಅದಕ್ಕೇ ನಾನೂ ಆಶ್ಚರ್ಯ ಪಡುತ್ತೇನೆ. ದೇಶವು ಇಷ್ಟರ ಮಟ್ಟಿಗೆ ಅರಾಜಕ ಸ್ಥಿತಿಯಲ್ಲಿರುವುದೆಂದು ನಾನೆಂದೂ ಊಹಿಸಲಿಲ್ಲ. ಪಟ್ಟಣದ ಪ್ರಾಕಾರಗಳಾಚೆಗೆ ಶತ್ರುಗಳೂ, ಒಳಗೆ ಕೆರಳಿಕೊಂಡಿರುವ ಪ್ರಜೆಗಳೂ, ಅವರಿಗೆ ಜತೆಯಾಗಿ ನಮ್ಮ ಸೈನಿಕರೂ ಅಂದರೆ ಏನು ಅರ್ಥ? ಇವರಿಗೆ ರಾಜನು ಸಿಂಹಾಸನವನ್ನು ಬಿಟ್ಟುಕೊಡಬೇಕು. ರಾಜ್ಯಾಧಿಕಾರವೆಲ್ಲಾ ಅವರಿಗೆ ಬೇಕು. ಈಗಿನ ಪರಿಸ್ಥಿತಿ ಇದೇ ತಾನೆ? ಅಲ್ಲವೇ ಶಿವವತ್ತಾ?' ಎಂದು ನನ್ನನ್ನು ಕೇಳಿದನು. —(ಇನ್ನೂ ಇದೆ)





## ಅಮೂಲ್ಯವಜ್ರ

ಪ್ರತಿಯೊಂದು ವಿಷಯವನ್ನೂ ಸರಿತೂಗಿ ನೋಡುವಂತಹ ವಿವೇಚನಾಶೀಲನಾದ ರಾಜಾ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ತನ್ನ ಹೆಗಲಿಗೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೇ, ಈ ಅರ್ಧ ರಾತ್ರಿಯ ಹೊತ್ತಿನಲ್ಲಿ ನೀನು ಅದೆಂತಹ ಮಹಾ ಸಂಪಾದನೆಗಾಗಿ ಇಷ್ಟು ಹೆಣಗುವಿಯೋ ನನಗಂತೂ ತಿಳಿಯದು. ಒಂದೊಂದು ಸಾರಿ ದೊಡ್ಡ ದೊಡ್ಡ ಆಶೆಗಳಿಂದ ದೊಡ್ಡ ದೊಡ್ಡ ಕಷ್ಟಗಳೇ ಬರುತ್ತವೆನ್ನಲು ಉದಾಹರಣೆಯಾಗಿ, ಒಬ್ಬ ರಾಜನೂ, ಒಬ್ಬ ಕಟ್ಟಿಗೆ ಒಡೆಯುವವನೂ ನನ್ನ ನೆನಪಿಗೆ ಬರುತ್ತಾರೆ. ಅವರ ಕಥೆಯನ್ನು ಹೇಳುತ್ತೇನೆ. ದಾರಿಯ ಶ್ರಮ ತಿಳಿಯದಂತೆ ಕೇಳುತ್ತಾ ನಡೆ." ಎಂದು ಹೀಗೆ ಹೇಳತೊಡಗಿತು :

ಹಿಂದೆ ವಜ್ರಗಿರಿ ರಾಜ್ಯವನ್ನು ರವಿವರ್ಮನೆಂಬ ರಾಜನು ಪಾಲಿಸುತ್ತಿದ್ದಾಗ, ಆ ರಾಜ್ಯದ ಅರಣ್ಯ

ಬೇತಾಳ ಕಥೆಗಳು?...



ಪ್ರಾಂತದಲ್ಲಿ ಚಂದ್ರಯ್ಯನೆಂಬ ಕಟ್ಟಿಗೆ ಒಡೆದು ಜೀವಿಸುವವನೊಬ್ಬನಿದ್ದನು. ಅವನು ಕಾಡಿನಿಂದ ಕಟ್ಟಿಗೆ ಒಡೆದು ಹೊತ್ತು ತಂದು ಊರವರಿಗೆ ಮಾರಿ ಅದರಿಂದಲೇ ಕುಟುಂಬ ಪೋಷಣೆ ಮಾಡುತ್ತಿದ್ದನು. ಅವನ ಮಗ ಗೋಪಿ ಎಂಬವನಿಗೆ ಹತ್ತು ವಯಸ್ಸಾಗಿತ್ತು. ತಂದೆ ಅವನನ್ನು ಐಗಳ ಜಗಲೀ ಶಾಲೆಗೆ ಹೋಗಿ ಕಲಿಯಲು ಹೇಳುತ್ತಿದ್ದನು. ಆಟದ ಬುದ್ಧಿಯ ಆ ಹುಡುಗ ತಂದೆಯ ಮಾತನ್ನು ಲಕ್ಷ್ಯ ಮಾಡದೆ ಕಾಡಿನ ಬದಿಗೆ ಹೋಗಿ ಆಡುತ್ತಾ ಹೊತ್ತು ಕಳೆಯುವನು.

ಒಂದು ದಿನ ಗೋಪಿ ಜುಳು ಜುಳು ಹರಿದೋಡುವ ಕಾಡಿನ ತೊರೆಯ ಹತ್ತಿರ ಆಟವಾಡಿಕೊಂಡಿರುವಾಗ ಅವನಿಗೊಂದು ಬಣ್ಣ ಬಣ್ಣದ ಗಾಜಿನ ಕಲ್ಲು ಸಿಕ್ಕಿತು. ಅದರೊಂದಿಗೆ ಅವನು ಸ್ವಲ್ಪ ಹೊತ್ತು ಆಡಿಕೊಂಡಿದ್ದು, ಆಮೇಲೆ ಅದನ್ನು ಮನೆಗೆ ತಂದನು, ಚಂದ್ರಯ್ಯ ಕಟ್ಟಿಗೆ ಹೊರೆ ಹೊತ್ತು ಮನೆಗೆ ತಂದು ಹಾಕಿ, ಮಗನ ಕೈಯಲ್ಲಿದ್ದ ಬಣ್ಣದ ಕಲ್ಲನ್ನು ತೆಗೆದು ನೋಡಿ "ಚೆಂದಾಗಿದೆ" ಎಂದು ಮೆಚ್ಚಿಕೊಂಡು, ಸಣ್ಣ ಮಗುವನ್ನು ಅದರಿಂದ ನೆಗಾಡಿಸಿ ಮತ್ತೆ ಗೋಪಿಗೇ ಕೊಟ್ಟು ತನ್ನ ಕೆಲಸದ ಮೇಲೆ ಆಚೆಗೆ ಹೋದನು.

ಗೋಪಿಗೆ ಗೋವಿಂದನೆಂಬ ಆಟದ ಸ್ನೇಹಿತನೊಬ್ಬನಿದ್ದನು, ತನಗೆ ಸಿಕ್ಕಿದ ಹೊಳಪಿನ ಕಲ್ಲನ್ನು ಗೋಪಿ ಹೆಮ್ಮೆಯಿಂದ ಅವನಿಗೂ ತೋರಿಸಿದನು. ತನ್ನ ಹತ್ತಿರ ಅಂತಹ ಸುಂದರವಾದ ಕಲ್ಲು ಇಲ್ಲದೆ ಹೋಯಿತಲ್ಲಾ ಎಂದು ಗೋವಿಂದನಿಗೆ ಅಸೂಯೆಯಾಯಿತು.

ಅವನು ಅದನ್ನು ಹೇಗಾದರೂ ಕದ್ದುಕೊಳ್ಳಬೇಕೆಂದು ಹೊಂಚು ಹಾಕುತ್ತ, ಸಾಯಂಕಾಲ ಗೋಪಿಯೊಂದಿಗೆ ಆಡುವಾಗ, ಅವನಿಗೆ ಗೊತ್ತಾಗದಂತೆ ಅದನ್ನು ಕದ್ದು ಮುಚ್ಚಿಟ್ಟುಕೊಂಡು ಮನೆಗೆ ತಂದನು, ಅದು ಎಲ್ಲಿಯೋ ಬಿಸಾಡಿ ಹೋಯಿತೆಂದೇ ಗೋಪಿ ಸ್ವಲ್ಪ ಪೇಚಾಡಿಕೊಂಡನು ಅಷ್ಟೇ.

ಗೋವಿಂದನ ತಂದೆ ದೊಡ್ಡ ಕುಡುಕ. ಗೋವಿಂದನು ನಿದ್ದೆಯಲ್ಲಿದ್ದಾಗ ಅವನ ಬಳಿಯಲ್ಲಿದ್ದ ಹೊಳೆಯುವ ಕಲ್ಲನ್ನು ಕುಡುಕ ತಂದೆ ಎತ್ತಿಕೊಂಡು ಹೆಂಡದಂಗಡಿಗೆ ಹೋದನು. ಆ ರಂಗಿನ ಕಲ್ಲನ್ನು ತೋರಿಸಿ ಒಂದು ಪಂಥ ಕಟ್ಟಿ ಒಂದು ಮೊಗೆ ಹೆಂಡದ ಕಾಸಾದರೂ ಗೆದ್ದು ಕೊಳ್ಳಬಹುದೆಂದು ಅವನಿಗೆ ತೋರಿತು.

ಅಂತೆಯೇ ಹೆಂಡದಂಗಡಿಗೆ ಹೋಗಿ "ಒಂದೇ ರೂಪಾಯಿ ಪಂಥ, ನಾನೊಂದು ತೋರಿಸುತ್ತೇನೆ. ಅದನ್ನೇ ಯಾರಾದರೂ ತೋರಿಸುವಿರಾ ?" ಎಂದು ಪಂಥದ ಪ್ರಶ್ನೆ ಹಾಕಿದನು, "ಅದೇನೆಂದು ತೋರಿಸು. ಆಮೇಲೆ ಪಂಥ ಕಟ್ಟೋಣ" ಎಂದನೊಬ್ಬ. ಅವನು ತೋರಿಸಿದ ಕಲ್ಲನ್ನು ನೋಡಿ ಎಲ್ಲರೂ ಗೊಳ್ಳನೆ ನಕ್ಕರು.



ಹತ್ತಿರವೇ ಕುಳಿತಿದ್ದ ಸರಾಫನಂಗಡಿಯವನೊಬ್ಬನು ಅದನ್ನು ಚೆನ್ನಾಗಿ ನೋಡಿ, ಅದು ಸ್ವಲ್ಪ ಬೆಲೆಯುಳ್ಳ ಕಲ್ಲಾಗಿರಬೇಕೆಂದುಕೊಂಡನು. ಗೋವಿಂದನ ತಂದೆ ಕುಡಿದ ಮಯಕದಲ್ಲಿರುವಾಗ ಅವನು ಅದನ್ನು ಲಪಟಾಯಿಸಿಕೊಂಡು, ಮರುದಿನ ದೊಡ್ಡ ಬೀದಿಯಲ್ಲಿದ್ದ ವಜ್ರಗಳ ವ್ಯಾಪಾರಿಯ ಬಳಿಗೆ ಹೋದನು. ವ್ಯಾಪಾರಿ ಆ ಕಲ್ಲನ್ನು ನೋಡಿ ಅದು ಅಮೂಲ್ಯವಾದ ವಜ್ರವೆಂದು ಗ್ರಹಿಸಿ ಒಂದೆರಡು ಕ್ಷಣ ಸಂಭ್ರಮಾಶ್ಚರ್ಯಗಳಲ್ಲಿ ವಿಹರಿಸಿ, ಪ್ರಸ್ತುತಕ್ಕೆ ಬಂದು ಬೇಸರದಿಂದ ಮುಖವನ್ನು ಸಿಂಡರಿಸಿ, "ಇದೆಲ್ಲಿ ಸಿಕ್ಕಿತೋ ? ನನ್ನ ಹತ್ತಿರ ಏಕೆ ತಂದಿ ? ಬಣ್ಣದ ಗಾಜಿನ ತುಂಡು. ಗಾಜಿನ ಮಣಿಮಾಲೆಯಲ್ಲಿ ಇಡಿಸಿದರೆ ಅಡವಿ ಜಾತಿಯವರು ಕೊಂಡು ಕೊಂಡಾರು. ಹುಂ, ಇರಲಿ. ಮೊದಲ ಬೋಣಿ ಗಿರಾಕಿ ಅಂತ ಇಟ್ಟುಕೊಳ್ಳುತ್ತೇನೆ" ಎಂದು ಒಂದು ವರಹವನ್ನು ಅವನ ಕೈಗೆ ಕೊಟ್ಟನು.

ಆ ದಿನ ರಾತ್ರಿ ವಜ್ರಗಳ ವ್ಯಾಪಾರಿ ಆ ಕಲ್ಲಿಗೆ ಸಾಣೆ ಹಿಡಿಸಿದನು, ಬೆಲೆ ಬಾಳುವ ಆ ವಜ್ರವು ಕಾಂತಿಗಳನ್ನು ಹೊರಡಿಸುತ್ತ, ಕಣ್ಣು ಕೋರೈಸುವಂತಾಯಿತು. ರವಿವರ್ಮ ರಾಜನಿಗೆ ವಜ್ರ ವೈಡೂರ್ಯಗಳೆಂದರೆ ಅಪರಿಮಿತ ಮಮತೆ. ಈ ಒಂದು ವಜ್ರದಿಂದ ತನ್ನ ಮನೆಯಲ್ಲಿ ಲಕ್ಷ್ಮಿ ನಾಟ್ಯವಾಡುವಳೆಂದು ವ್ಯಾಪಾರಿ ಆನಂದದಿಂದ ಉಕ್ಕಿದನು.

ಬೆಳಗಾದ ಕೂಡಲೇ ವ್ಯಾಪಾರಿ ಆ ವಜ್ರದೊಂದಿಗೆ ರಾಜನನ್ನು ನೋಡಲು ಹೋದನು. ರವಿವರ್ಮನು ಆ ವಜ್ರವನ್ನು ನೋಡಿ, ಇದು ತನ್ನಂತಹ ದೊಡ್ಡ ರಾಜನ ಕಿರೀಟದಲ್ಲಿಟ್ಟುಕೊಳ್ಳಲು ಯೋಗ್ಯವಾದ ವಜ್ರ. ಹೀಗೆಂದುಕೊಂಡು ರಾಜನು ಅವನು ಹೇಳಿದ ಬೆಲೆಯನ್ನು ಕೊಟ್ಟು ಕಳುಹಿಸಿ, ವಜ್ರವನ್ನು ತನ್ನ ಕಿರೀಟಕ್ಕೆ ಹೊಂದಿಸಿ ಇಡಿಸಿದನು. ಮರುದಿನ ಆ ರಾಜನು ಹೊಸ ವಜ್ರವನ್ನು ಹೊಂದಿಸಿದ ಕಿರೀಟದೊಂದಿಗೆ ಸಭೆಗೆ ಬಂದನು. ಸಭಾ ಮಂದಿರವು ವಿಚಿತ್ರಕಾಂತಿಯಿಂದ ತುಂಬಿತು. ಸಭಿಕರು ರಾಜನ ಕಿರೀಟವನ್ನೇ ನೋಡತೊಡಗಿದರು. ಆದರಿಂದ ರಾಜನ ಮುಖಕ್ಕೊಂದು ವಿಶೇಷ ಕಳೆಯುಂಟಾಗಿತ್ತು.

ರಾಜನ ಕಿರೀಟದ ವಜ್ರದ ವಿಷಯ ಸಭಾಸದರಿಂದ ಊರೆಲ್ಲಾ ತಿಳಿದು ಹೊರದೇಶದ ರಾಜನಾದ ವೀರಸಿಂಹನಿಗೂ ಗೊತ್ತಾಯಿತು. ಆರ್ಥಿಕ ಶಕ್ತಿ ಸೈನಿಕ ಶಕ್ತಿಗಳಲ್ಲಿ ಅವನು ರವಿವರ್ಮನನ್ನು ಮೀರಿಸಿದವನಾಗಿದ್ದನು. ಅಷ್ಟೊಂದು ಮಹತ್ವದ ವಜ್ರವು ತನ್ನ ಕಿರೀಟದಲ್ಲಿ ಇಲ್ಲದೆ ಹೋದುದನ್ನು ನೆನೆದು ಅವನಿಗೆ ತಳಮಳ ಉಂಟಾಯಿತು.

ಶಕ್ತಿಶಾಲಿಯಾದ ಆ ರಾಜನ ತಳಮಳವು ಕಾರ್ಯರೂಪಕ್ಕಿಳಿದು, "ಆ ವಿಶೇಷ ವಜ್ರವನ್ನು ಕೂಡಲೇ ತನಗೆ ಕಳುಹಿಸತಕ್ಕದ್ದು. ತಪ್ಪಿದಲ್ಲಿ ಯುದ್ಧವು ತಪ್ಪದು" ಎಂಬ ಎಚ್ಚರಿಕೆಯ ಪತ್ರವು ರವಿವರ್ಮನಿಗೆ



ಹೋಯಿತು. ತಾನು ಆವನಿಗಿಂತ ಬಲಹೀನನೆಂದು ಗೊತ್ತಿದ್ದೂ ಸಹ ರವಿವರ್ಮರಾಜನು ಆ ವಜ್ರವನ್ನು ವೀರಸಿಂಹನಿಗೆ ಕೊಟ್ಟುಬಿಡಲು ಒಪ್ಪಲಿಲ್ಲ, ಹಾಗೆ ಕೊಡುವುದು ಅವಮಾನವೆಂದು ಭಾವಿಸಿ, ಕೊಡಲಾಗುವುದಿಲ್ಲವೆಂದು ಖಂಡಿತವಾಗಿ ಹೇಳಿಬಿಟ್ಟನು.

ಕೂಡಲೇ ವೀರಸಿಂಹನು ವಜ್ರಗಿರಿ ರಾಜ್ಯದಮೇಲೆ ದಾಳಿ ಮಾಡಿ, ಯುದ್ಧದಲ್ಲಿ ರವಿವರ್ಮನನ್ನು ಸುಲಭದಲ್ಲಿ ಸೋಲಿಸಿ ವಜ್ರದೊಂದಿಗೆ ಅವನ ಸಿಂಹಾಸನವನ್ನು ಕೂಡಾ ತನ್ನದಾಗಿ ಮಾಡಿಕೊಂಡನು. ಅವನು ರವಿವರ್ಮನ ಕಿರೀಟದಿಂದ ಆ ವಜ್ರವನ್ನು ಸುಲಭವಾಗಿ ಎಬ್ಬಿಸಿ ತೆಗೆದು ತನ್ನ ಕಿರೀಟಕ್ಕೆ ಹೊದಿಸಲು ಸ್ವರ್ಣಕಾರನನ್ನು ಕರೆದು ತರಲು ಸೇವಕನನ್ನು ಕಳುಹಿಸಿದನು. ಅವನು ಬರುವವರೆಗೆ ಅದನ್ನೊಂದು ಚಿನ್ನದ ತಟ್ಟೆಯಲ್ಲಿಟ್ಟು ತನ್ನ ಶಯನಾಗಾರಕ್ಕೆ ಹೋಗಿ ವಿಶ್ರಮಿಸಿದನು. ವೀರಸಿಂಹನ ಚಿಕ್ಕ ಕುಮಾರ ಐದು ವಯಸ್ಸಿನ ಬಾಲನು, ಆ ವಜ್ರವನ್ನು ನೋಡಿ ಆಡಲಿಕ್ಕೆ ಎತ್ತಿಕೊಂಡು ಉದ್ಯಾನಕ್ಕೆ ಹೋದನು. ಆ ಸಮಯದಲ್ಲಿ ಆಕಾಶದಲ್ಲಿ ಹಾರುತ್ತಿದ್ದ ಗಿಡುಗವೊಂದು ಅದನ್ನು ನೋಡಿ ಏನೋ ತಿನ್ನುವ ವಸ್ತುವೆಂದುಕೊಂಡು ವೇಗವಾಗಿ ಬಂದು ಆ ವಜ್ರವನ್ನು ಎತ್ತಿಕೊಂಡು ಹೋಯಿತು.

ವೀರಸಿಂಹರಾಜನು ಆ ವಜ್ರವನ್ನು ಹುಡುಕಲು ಅರಮನೆಯನ್ನೇ ಅಡಿಮೇಲು ಮಾಡಿ, ಎಲ್ಲರನ್ನೂ ವಿಚಾರಿಸಿ ನಿರಾಶೆಯಿಂದ ಕುಣಿದಾಡಿ ಆಯಾಸಪಟ್ಟದ್ದೇ ಬಂತು. ಅವನ ಚಿಕ್ಕ ಮಗ ಅದರ ಸಂಗತಿಯನ್ನು ಉದ್ಯಾನದಲ್ಲೇ ಮರೆತಿದ್ದನು,

ಗಿಡುಗವು ವಜ್ರವನ್ನು ಕಾಡಿನ ಕಡೆಗೆ ಒಯ್ದು ಒಂದು ಮರದ ಕೊಂಬೆಯ ಮೇಲೆ ಎರಗಿ, ತಾನು ಎತ್ತಿಕೊಂಡು ಬಂದುದು ತಿನ್ನುವ ವಸ್ತುವಲ್ಲವೆಂದು ತಿಳಿದು ಅಲ್ಲೇ ಬಿಟ್ಟು ಹೋಯಿತು. ವಜ್ರವು ಮರದ ಕೊಂಬೆಗಳೆಡೆಯಲ್ಲಿ ಸಿಕ್ಕಿಕೊಂಡಿತ್ತು.

ಒಂದು ದಿನ ಗೋಪಿಯ ತಂದೆ ಕಟ್ಟಿಗೆ ಚಂದ್ರಯ್ಯ ಆ ಮರದ ಹತ್ತಿರವೇ ಬಂದನು. ಅವನು ಮರವನ್ನೇರಿ ಒಣಗಿದ ಕೊಂಬೆಗಳನ್ನು ನೋಡಿ ಕಡಿಯುತ್ತ ಮರದ ಮೇಲೆ ಸ್ವಲ್ಪದೂರ ಹೋದನು, ಕೊಂಬೆಯ ಮಧ್ಯವಲ್ಲಿ ಥಳಥಳಿಸುವ ವಜ್ರವನ್ನು ನೋಡಿ, ಹಾಗೆಯೇ ಸ್ತಬ್ಧನಾದನು. ತುಸುತಾಳಿ ಅದನ್ನು ಎತ್ತಿಕೊಳ್ಳಲು ಕೈಚಾಚಿ, ತಟ್ಟನೆ ಕೈಯನ್ನು ಹಿಂದಕ್ಕೆಳೆದುಕೊಂಡು ಬೇಗಬೇಗನೆ ಮರದಿಂದಿಳಿದು ಹಿಂದಿರುಗಿ ನೋಡದೆಯೇ ತನ್ನ ಊರಿನ ಕಡೆಗೆ ವೇಗವಾಗಿ ಓಡಿದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜನೇ, ನನಗೆ ವಜ್ರಗಿರಿ ರಾಜ ರವಿವರ್ಮನ ಪ್ರವರ್ತನೆಯೂ, ಕಟ್ಟಿಗೆ ಚಂದ್ರಯ್ಯನ ಪ್ರವರ್ತನೆಯೂ ವಿಚಿತ್ರವಾಗಿ ಕಾಣುತ್ತದೆ. ಅಮೂಲ್ಯ ವಜ್ರದ ಮೇಲಿನ ಮಮಕಾರದಿಂದ ರವಿವರ್ಮನು

ತನಗಿಂತ ಹೆಚ್ಚು ಬಲಿಷ್ಠನ ಮೇಲೆ ಯುದ್ಧಕ್ಕೆ ಆಸ್ಪದ ಕೊಟ್ಟು ಸರ್ವನಾಶ ತಂದುಕೊಂಡನೇಕೆ? ಕೇಳಿದ ಕೂಡಲೇ ವೀರಸಿಂಹನಿಗೆ ಆ ವಜ್ರ ಕೊಡುತ್ತಿದ್ದರೆ ಅವನಿಗೆ ರಾಜ್ಯವಾದರೂ ದಕ್ಕುತಿತ್ತಷ್ಟೆ? ಕಟ್ಟಿಗೆ ಕಡಿದು ಜೀವಿಸುವ ಚಂದ್ರಯ್ಯನು ಆ ವಜ್ರವನ್ನು ನೋಡಿ ಅಷ್ಟೊಂದು ಹೆದರಿ ಓಡಲಿಕ್ಕೆ ಏನಾಯಿತು? ಅದನ್ನು ಯಾರಿಗೆ ಮಾರಿದ್ದರೂ ಅವನ ದಾರಿದ್ರ್ಯವು ತೀರಿಹೋಗುತ್ತಿತ್ತು, ರಾಜನ ಮನೆಯಲ್ಲಿ ವಜ್ರವು ಕಾಣದೆ ಹೋದ ಸಂಗತಿ ಎಲ್ಲರಿಗೂ ಗೊತ್ತಾಗಿರುವಾಗ, ಇದು ಅದೇ ವಜ್ರವೇನೋ ಎಂಬ ಸಂದೇಹದಲ್ಲಾದರೂ ಆದನ್ನೊಯ್ದು ರಾಜನಿಗೆ ಕೊಡುತ್ತಿದ್ದರೆ ಅವನಿಗೆ ಬಹುಮಾನವಾದರೂ ಸಿಗುತ್ತಿತ್ತು, ಹಾಗೇಕೆ ಮಾಡಲಿಲ್ಲ? ಇದಕ್ಕೆ ತಕ್ಕ ಸಮಾಧಾನ ಹೇಳದೆ ಹೋದರೆ ನೀನು ತಲೆಯೊಡೆದು ಸಾಯುವಿ" ಎಂದು ಹೇಳಿ ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಕಟ್ಟಿಗೆ ಒಡೆಯುವ ಚಂದ್ರಯ್ಯನ ಪ್ರವರ್ತನೆಯಲ್ಲಿ ವಿಚಿತ್ರವಾಗಿ ಕಾಣಲಿಕ್ಕೆ ಏನೂ ಇಲ್ಲ. ಸಾಣೆ ಹಿಡಿಯಲ್ಪಟ್ಟುದರಿಂದ ಅದು ವಜ್ರವೆಂದು ಅವನಿಗೆ ಗೊತ್ತಾಗಿದೆ. ಅದರ ಕಾರಣದಿಂದಲೇ ತಮ್ಮ ರಾಜನು ಸೋತದ್ದೂ ಅವನಿಗೆ ಗೊತ್ತು. ಆ ವಜ್ರವು ಕಾಣದೆ ಹೋದುದನ್ನೂ ಅರಿತಿದ್ದಾನೆ. ಬಹುಶಃ ಇದು ಅದೇ ವಜ್ರವೋ, ಮತ್ತಾವುದೋ ಆದರೂ ವಜ್ರಗಳಿಂದ ಸಿಂಹಾಸನಗಳೇ ಉರುಳುತ್ತವೆಂಬುದು ನಿಜ. ವಜ್ರವು ಅವನ ದೃಷ್ಟಿಯಲ್ಲಿ ವಿನಾಶಕಾರಿ. ಮನುಷ್ಯನಿಗೆ ಒಂದೇ ಸಮಯದಲ್ಲಿ ಧನಾಶೆಯೂ, ಪ್ರಾಣಭೀತಿಯೂ ಉಂಟಾದಾಗ ಬುದ್ಧಿವಂತನಾದವನು ಪ್ರಾಣರಕ್ಷಣೆಗೇ ಪ್ರಾಧಾನ್ಯತೆ ಕೊಡುತ್ತಾನೆ. ಅಂತಲೇ ಅವನು ವಜ್ರವನ್ನು ಮುಟ್ಟದೆ ಓಡಿದನು. ಸಾಧಾರಣವಾಗಿ ಮಾನವರಲ್ಲಿ ಸಾಂಘಿಕವಾದ ಹೆಚ್ಚುಕಡಿಮೆಗಳಿರುತ್ತವೆ. ಅಪೂರ್ವವಾದುದನ್ನು ನೋಡಿದಾಗ ಅದರ ಮೇಲೆ ಇಷ್ಟಪಡುವುದು ಕೂಡ ಮನುಷ್ಯರ ಸ್ವಭಾವವೇ. ನೆರೆಯ ರಾಜನು ಯುದ್ಧದ ಭಯ ತೋರಿಸಿ ಕೇಳಿದ ಕೂಡಲೇ ವಜ್ರವನ್ನು ಕೊಟ್ಟುಬಿಡುವುದೆಂದರೆ ತಾನು ಅವನ ಸಾಮಂತನೆಂದು ಒಪ್ಪಿಕೊಂಡಂತೆ ರವಿವರ್ಮನಿಗೆ ತೋರಿತು. ಅದು ಕ್ಷಾತ್ರಧರ್ಮಕ್ಕೆ ವಿರುದ್ಧವಾಗಿ ತಾನು ರಾಜ್ಯಪಾಲನೆಗೆ ಅನರ್ಹನೆನಿಸುವೆನೆಂತಲೇ ರವಿವರ್ಮನು ಕ್ಷತ್ರಿಯೋಚಿತ ಯುದ್ಧಕ್ಕೆ ಇಳಿದನು. ಯುದ್ಧದಲ್ಲಿ ಜಯಾಪಜಯಗಳು ಧರ್ಮಾಧರ್ಮಗಳನ್ನು ಹೊಂದಿಕೊಂಡಿಲ್ಲವಷ್ಟೇ?"

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯನ್ನು ಹಿಡಿದುಕೊಂಡಿತು.



# ಸಹಾಯಕರು

ರಂಗಾಪುರದ ಜಮೀನ್ದಾರರು ಸಮಯ ಬಂದಾಗಲೆಲ್ಲಾ ತಮ್ಮ ಜಮೀನಿಗೆ ಸೇರಿದ ಗ್ರಾಮಗಳನ್ನು ಸಂದರ್ಶನ ಮಾಡಿ, ಊರವರ ಒಳಿತು ಕೆಡುಕುಗಳನ್ನು ಕುರಿತು ವಿಚಾರಿಸಿ ತಿಳಿಯುವ ಪದ್ಧತಿಯನ್ನಿಟ್ಟುಕೊಂಡಿದ್ದರು.

ಒಂದು ಸಾರಿ ಅವರು ರಾಮನಹಳ್ಳಿ ಎಂಬ ಊರಿಗೆ ಹೋದಾಗ, ಗ್ರಾಮದ ಮುಖ್ಯಸ್ಥರ ಸಮಾವೇಶಕ್ಕೆ ಶಿವಾಲಯದ ಪಟಾಂಗಣದಲ್ಲಿ ಏರ್ಪಡಿಸಲಾಗಿತ್ತು. ಜಮೀನ್ದಾರರೂ, ಗ್ರಾಮದಪಟೇಲರೂ ಬಂದು ವೇದಿಕೆಯ ಮೇಲೆ ಆಸನಗಳಲ್ಲಿ ಕುಳಿತರು.

ಗ್ರಾಮಸ್ಥರು ಒಬ್ಬೊಬ್ಬರೇ ಸಭೆಗೆ ಬರತೊಡಗಿದರು. ಬಂದವರೆಲ್ಲಾ ವೇದಿಕೆಯ ಮುಂದಿರುವ ನಾಲ್ಕು ಖಾಲೀ ಕುರ್ಚಿಗಳನ್ನು ಹಾಗೆಯೇ ಬಿಟ್ಟು, ಅವುಗಳ ಹಿಂದೆಯೇ ಜಾಗ ಹುಡುಕುತ್ತ ಅನುವುಮಾಡಿಕೊಂಡು ಕುಳಿತುಕೊಳ್ಳ ತೊಡಗಿದರು.

ಅದನ್ನು ನೋಡಿ ಜಮೀನ್ದಾರರು ಆಶ್ಚರ್ಯಪಡುತ್ತ, "ಆ ನಾಲ್ಕು ಕುರ್ಚಿಗಳನ್ನು ಹಾಗೆ ಖಾಲಿಯಾಗಿಯೇ ಬಿಡುತ್ತಾರೇಕೆ ? ಗ್ರಾಮದ ಮುಖ್ಯರು ಕೆಲವರು ಬಂದು ಅವುಗಳಲ್ಲಿ ಕುಳಿತುಕೊಳ್ಳಲಿ" ಎಂದರು.

ಜಮೀನ್ದಾರರು ಹಾಗೆ ಹೇಳಿದುದನ್ನು ಕೇಳಿ ಜನರ ಮಧ್ಯದಲ್ಲಿದ್ದ ಒಬ್ಬನು ಎದ್ದು, "ಅದು ನಾಲ್ಕು ಮಂದಿ ದೊಡ್ಡವರಿಗಾಗಿ. ವಸ್ತಾದಿ ವೀರಯ್ಯ, ಕಲ್ಲೀಮೀಸೆ ರುದ್ರಯ್ಯ, ಖಂಡತುಂಡ ಸಂಕ್ರಪ್ಪ, ಬಡ್ಡೀ ಜಿನ ರಾಜಯ್ಯ ಇಷ್ಟೊತ್ತಿಗೆ ಹೊರಟಿದ್ದಾರು. ಅವರು ಖಂಡಿತಾ ಸಭೆಗೆ ಬರ್ತೇವೆ ಅಂದಿದ್ದಾರೆ. ಅವರನ್ನು ಹಿಂದೆ ಕೂಡಿಸೋದು ಚೆನ್ನಾಗಿರದಷ್ಟೇ ?" ಎಂದನು.

ಅದನ್ನು ಕೇಳಿ ಜಮೀನ್ದಾರರಿಗೆ ಗ್ರಾಮದ ಪರಿಸ್ಥಿತಿ ಅರ್ಥವಾಯಿತು. ಅವರು ಗ್ರಾಮಾಧಿಕಾರಿ ಪಟೇಲರ ಕಡೆಗೆ ಚುರುಚುರು ನೋಡಿ, "ಗ್ರಾಮ ಪಾಲಕರಾಗಿ ಸಹಾಯ ಮಾಡುವವರು ಇಂಥವರೆಂದು ತಿಳಿಯಿತು. ನಿಮ್ಮನ್ನು ಈ ಪದವಿಯಿಂದ ತೊಲಗಿಸಿ ತುಂಬಿದ ಸಭೆಯಲ್ಲಿ ಇದ್ದ ಸಂಗತಿ ಧೈರ್ಯವಾಗಿ ಹೇಳಿದನಲ್ಲಾ, ಅವನನ್ನೇ ಇನ್ನು ಮುಂದೆ ಗ್ರಾಮಾಧಿಕಾರಿಯಾಗಿ ಪಟೇಲಿಕೆಗೆ ನಿಯಮಿಸುತ್ತೇನೆ" ಎಂದರು.

ಸಭೆಯಲ್ಲಿದ್ದವರೆಲ್ಲಾ ಸಂತೋಷದಿಂದ ಚಪ್ಪಾಳೆ ತಟ್ಟಿದರು.





# ಅನರ್ಹತೆ

ಹಿಂದೆ ಗೋದಾವರ ಸಂಸ್ಥಾನದ ಜಮೀನ್ದಾರ ಕೋದಂಡೊಡೆಯರ ಹತ್ತಿರ ಈಶ್ವರಪ್ಪನೆಂಬ ಕುಲ ಕರಣಿ ಲೆಕ್ಕ ನೋಡುವವನಾಗಿದ್ದನು. ಈಶ್ವರಪ್ಪ ತುಂಬಾ ನಂಬುಗಸ್ಥ. ಕೆಲಸಕಾರ್ಯಗಳಲ್ಲಿ ತುಂಬ ಚುರುಕು. ಅವನ ಮೇಲೆ ಕೋದಂಡೊಡೆಯರಿಗೆ ತುಂಬಾ ಅಭಿಮಾನ.

ಒಂದು ಸಾರಿ ಈಶ್ವರಪ್ಪನಿಗೆ ಏನೋ ವ್ಯಾಧಿ ಹಿಡಿದು ಹಾಸಿಗೆ ಸೇರಿದನು. ಜಮೀನ್ದಾರ ಕೋದಂಡೊಡೆಯರು ತಮ್ಮ ಸ್ವಂತ ವೈದ್ಯನನ್ನು ಕರೆದುಕೊಂಡು ಈಶ್ವರಪ್ಪನ ಮನೆಗೆ ಬಂದು ರೋಗಿಯನ್ನು ಪರೀಕ್ಷೆ ಮಾಡಿಸಿದರು.

ವೈದ್ಯನು ಮನಸ್ಸು ಕೊಟ್ಟು ಶ್ರದ್ಧೆಯಿಂದ ಎರಡು ವಾರಗಳ ವರೆಗೆ ಈಶ್ವರಪ್ಪನಿಗೆ ಚಿಕಿತ್ಸೆ ಮಾಡಿ, ಅದು ಗುಣವಾಗುವ ರೋಗವಲ್ಲವೆಂದೇ ಜಮೀನ್ದಾರರೊಂದಿಗೆ ಹೇಳಿಬಿಟ್ಟನು. ಜಮೀನ್ದಾರರು ಮುಚ್ಚುಮರೆಮಾಡದೆ ಈಶ್ವರಪ್ಪನ ಕುಟುಂಬದ ವರಿಗೂ ಆ ಸಂಗತಿಯನ್ನು ತಿಳಿಯಪಡಿಸಿ, ಸ್ವತಃ ಈಶ್ವರಪ್ಪನನ್ನು ನೋಡಲು ಬಂದರು. ತನ್ನ ಆರೋಗ್ಯವು ದಿನದಿಂದ ದಿನಕ್ಕೆ ಇಳಿದು ಹೋಗುತ್ತದೆಂದು ತಿಳಿದುಕೊಂಡ ಈಶ್ವರಪ್ಪನು ಕೋದಂಡೊಡೆಯರೊಂದಿಗೆ, "ಅಯ್ಯಾ, ನನಗಿರುವುದು ಒಬ್ಬನೇ ಮಗ. ನಾನು ಹೋದ ಮೇಲೆ ನನ್ನ ಮಗನನ್ನು ನಾನು ಮಾಡಿದ ಉದ್ಯೋಗಕ್ಕೇ ನಿಯಮಿಸುವಿರೆಂದು ನಂಬುತ್ತೇನೆ. ತಾವು ಹಾಗೆ ಮಾಡದೆ ಹೋದರೆ ನನ್ನ ಕುಟುಂಬವು ಬೀದಿಯಪಾಲುಗತ್ತದೆ." ಎಂದು ಹೇಳುತ್ತ ಕಣ್ಣೀರು ತುಂಬಿಕೊಂಡನು.

"ಈಶ್ವರಪ್ಪಾ, ನೀನೇನೂ ಚಿಂತಿಸಬೇಡ. ಆ ಉದ್ಯೋಗವನ್ನು ನಿನ್ನ ಮಗನಿಗೇ ಕೊಡಬೇಕೆಂದು ಈ ಮೊದಲೇ ನಿಶ್ಚಯಿಸಿದ್ದೇನೆ. ಆ ವಿಷಯದಲ್ಲಿ ನಿನಗೆ ಸ್ವಲ್ಪವೂ ಚಿಂತೆ ಬೇಡ" ಎಂದರು ಕೋದಂಡೊಡೆಯರು.

ಅನಂತರ ಮೂರು ದಿನಗಳಲ್ಲಿ ಈಶ್ವರಪ್ಪನು ಶಾಶ್ವತವಾಗಿ ಕಣ್ಣು ಮುಚ್ಚಿದನು. ಅನಂತರ ಹದಿನೈದು ದಿನಗಳಮೇಲೆ ಜಮೀನ್ದಾರ ಕೋದಂಡೊಡೆಯರು ಈಶ್ವರಪ್ಪನ ಮಗನನ್ನು ತನ್ನ ಬಳಿಗೆ ಕರೆಯಿಸಿದರು. ಅವನು ಜಮೀನ್ದಾರರ ಬಳಿಗೆ ಬಂದ ಸಮಯದಲ್ಲೇ ಹೊರಗಿನ ಊರಿನಿಂದ ಬಂದ ಯುವಕನೊಬ್ಬನು ಜಮೀನ್ದಾರರಿಗೆ ನಮಸ್ಕರಿಸಿ

ರಾಂಬಾಬು

ಒಂದು ಪತ್ರವನ್ನು ಕೊಟ್ಟು ವಿನಯದಿಂದ ನಿಂತನು. ಆ ಪತ್ರವನ್ನು ಬರೆದುದು ಅವರ ಮಿತ್ರ ಸಣಕತ್ತೂರು ಸಂಸ್ಥಾನದ ಜಮೀನ್ದಾರರು. ಆ ಪತ್ರದಲ್ಲಿ ಅವರು "ಮುಖ್ಯವಾಗಿ, ಈ ಪತ್ರ ತರುವವನು ನನ್ನ ದಿವಾಣದಲ್ಲಿ ಆರು ವರ್ಷ ಲೆಕ್ಕದ ಕರಣಿಕನಾಗಿದ್ದ. ಒಳ್ಳೆಯ ಕೆಲಸಗಾರ. ನಿಮ್ಮ ಗೋದಾವರವೇ ಇವನ ಸ್ವಂತ ಊರಾದುದರಿಂದ ಅಲ್ಲೇ ಇರಲು ಆಶೆ ಪಡುತ್ತಾನೆ. ಅವನಿಗೆ ನಿಮ್ಮ ದಿವಾಣದಲ್ಲಿ ಲೆಕ್ಕದ ಕರಣಿಕ ಉದ್ಯೋಗ ಕೊಡಬೇಕೆಂದು ನಮ್ಮ ಅಪೇಕ್ಷೆ" ಎಂದು ಬರೆದಿದ್ದರು.

ಈ ಪತ್ರವು ಕೋದಂಡೊಡೆಯರನ್ನು ದೊಡ್ಡ ಇಕ್ಕಟ್ಟಿಗೆ ಸಿಕ್ಕಿಸಿತು. ಲೆಕ್ಕದ ಕೆಲಸದಲ್ಲಿ ಆರುವರ್ಷ ಅನುಭವವಿರುವ ವ್ಯಕ್ತಿಯನ್ನು ತಾನು ಯಾವ ಕಾರಣದಿಂದ ಉದ್ಯೋಗವಿಲ್ಲವೆಂದು ಹೇಳಲಾದೀತು? ಹಾಗೆಂದು ಅವನಿಗೆ ಉದ್ಯೋಗ ಕೊಟ್ಟುಬಿಟ್ಟರೆ ತನ್ನ ಹತ್ತಿರ ಬಹಳ ಕಾಲದಿಂದ ಸೇವೆ ಮಾಡಿದ ಈಶ್ವರಪ್ಪನ ಮಗನಿಗೆ ಏನು ದಾರಿ?

ಕೋದಂಡೊಡೆಯರು ಸ್ವಲ್ಪ ಹೊತ್ತು ಆಲೋಚನೆ ಮಾಡಿ. ಪತ್ರ ತಂದ ಯುವಕನನ್ನು ನೋಡಿ, "ನಿಮ್ಮ ಜಮೀನ್ದಾರರು ಕಳೆದ ವರ್ಷ ನನ್ನ ಹತ್ತಿರ ಸಾವಿರ ವರಹ ಸಾಲವಾಗಿ ಪಡೆದು ಈ ವರೆಗೂ ಹಿಂದೆ ಕಳುಹಿಸಲಿಲ್ಲ. ನೀನು ಹೋಗಿ ಈ ಸಂಗತಿಯನ್ನು ಅವರಿಗೆ ಹೇಳಿ ನಾಳೆ ಬಂದು ನನ್ನನ್ನು ನೋಡು" ಎಂದು ಕಳುಹಿಸಿದರು.

ಮಾರಣೇದಿನ ಅವನು ಹಿಂದಿರುಗಿ ಬಂದು, "ನಮ್ಮ ಜಮೀನ್ದಾರರು ನಿಮಗೇನೂ ಸಾಲ ಕೊಡಬೇಕಾಗಿಲ್ಲವೆಂದು ಹೇಳಿದ್ದಾರೆ. ಅವರ ಜಮೀನಿನಲ್ಲೇ ಕೊಳಗುಂಟೆ ಎಂಬ ಒಂದು ಕುಗ್ರಾಮವಿದೆ. ಅಲ್ಲಿ ಯಾರಾದರೂ ನಿಮ್ಮ ಕೈಯಿಂದ ಸಾಲ ತೆಗೆದುಕೊಂಡಿದ್ದಾರು ಅಂದರು" ಎಂದು ಹೇಳಿದನು.

ಅದನ್ನು ಕೇಳಿ ಕೋದಂಡೊಡೆಯರು ಮುಗುಳುನಕ್ಕು, "ನಿಮ್ಮ ಜಮೀನ್ದಾರರು ನನ್ನಿಂದ ಸಾಲಗೀಲ ಏನೂ ಪಡೆಯಲಿಲ್ಲ. ನೀನು ಆರು ವರ್ಷಗಳಿಂದ ಅವರ ದಿವಾಣದಲ್ಲಿ ಲೆಕ್ಕದ ಕೆಲಸ ಮಾಡುತ್ತಿರುವುದನ್ನು ತಿಳಿದು ನಿನ್ನ ಹತ್ತಿರ ಅದೊಂದು ಸುಳ್ಳು ಹೇಳಿದೆ. 'ನೀನು ಕೂಡಲೇ ಹೋಗಿ ಜಮೀನ್ದಾರರ ಹತ್ತಿರ ಕೇಳಿ ತಿಳಿದು ಕೊಂಡು ಬಂದಿರುವಿ. ಇದರಿಂದ ನಿನಗೆ ಸಣಕತ್ತೂರು ಜಮೀನ್ದಾರರ ಲೆಕ್ಕಗಳು ಸ್ವಲ್ಪವೂ ಗೊತ್ತಿಲ್ಲವೆಂದು ತಿಳಿದು ಹೋಯಿತು. ಹೀಗಿರುವ ನಿನಗೆ ನನ್ನ ದಿವಾಣದಲ್ಲಿ ಉದ್ಯೋಗ ಸಿಗಲಾರದು" ಎಂದರು.

ಯುವಕನು ತಲೆ ತಗ್ಗಿಸಿ ಹೊರಟುಹೋದನು. ಈಶ್ವರಪ್ಪನ ಮಗನಿಗೆ ಕೋದಂಡೊಡೆಯರ ದಿವಾಣದಲ್ಲಿ ಲೆಕ್ಕದ ಕರಣಿಕ ಉದ್ಯೋಗವು ಅಂದೇ ಸಿಕ್ಕಿತು.



# "ನಿನಗೇ ಲಾಭ!"

ಒಂದಾನೊಂದು ಗ್ರಾಮದಲ್ಲಿ ಜೋಮಾಲನೆಂಬ ಯುವಕನಿದ್ದನು. ಸೊಂಟ ಬಗ್ಗಿಸಿ ಕೆಲಸ ಮಾಡುವುದೆಂದರೆ ಅವನಿಂದಾಗದು. ತಿರುಗಿತಿಂದೇ ಬದುಕಿಕೊಂಡಿದ್ದನು. ಹೋಗೆಂದು ತುಚ್ಛೀಕಾರಮಾಡಿದರೂ ಅವನಿಗೇನೂ ನಾಟದು. ಯಾರೋ ಒಬ್ಬರಿಂದ ಏನಾದರೊಂದಿಷ್ಟು ಪಡೆದು ತಿಂದು, ಊರ ಹೊರಗಿನ ಅಮ್ಮನವರ ಪಾಳು ಗುಡಿಗೆ ಹೋಗಿ ನಿಶ್ಚಿಂತೆಯಿಂದ ಮಲಗುವನು.

ಒಂದುಸಾರಿ ಎರಡು ದಿನಗಳವರೆಗೂ ಅವನಿಗೇನೂ ತಿನ್ನಲು ಸಿಗಲಿಲ್ಲ. ಅವನು ಹಸಿವೆಯನ್ನು ತಡೆಯಲಾಗದೆ ಹೊಟ್ಟೆ ಅಮುಕಿಕೊಂಡು, ಅಮ್ಮನವರ ಗುಡಿಯನ್ನು ಸೇರಿ, "ಊರಿನಲ್ಲಿ ಅನ್ನದಾನದ ಮಹಿಮೆ ತಿಳಿದ ಪುಣ್ಯಾತ್ಮರೇ ಇಲ್ಲದೆ ಹೋದರು !" ಎಂದು ಎಲ್ಲರಿಗೂ ಶಾಪ ಹಾಕ ತೊಡಗಿದನು.

ಅವನ ಸಂಕಟವನ್ನು ನೋಡಿ ಗುಡಿಯೊಳಗಿನ ಅಮ್ಮನವರಿಗೆ ಕನಿಕರ ಮೂಡಿತು. ಕೂಡಲೇ ಅಮ್ಮನವರು ಅವನ ಮುಂದೆ ಪ್ರತ್ಯಕ್ಷವಾಗಿ, "ಎಲೋ ಜೋಮಾಲಾ ! ಕೈ ಕಾಲುಗಳು ಚೆನ್ನಾಗಿರುವ ನೀನು ಭಿಕ್ಷೆ ಬೇಡಿ ತಿರುಗುವುದೇಕೆ ? ದಿನಾ ಕಷ್ಟಪಟ್ಟು ಕೆಲಸ ಮಾಡಿ, ಸಂಪಾದಿಸಿದ್ದರಲ್ಲಿ ಒಂದು ರೂಪಾಯಿ ನನಗೆ ಕೊಡು. ನಾನು ನಿನಗೆ ಹತ್ತು ರೂಪಾಯಿ ಕೊಡುತ್ತೇನೆ" ಎಂದಳು.

ಜೋಮಾಲನು ಭಕ್ತಿಯಿಂದ ಅಮ್ಮನವರಿಗೆ ಕೈ ಜೋಡಿಸಿ, "ಹಾಗೆ ನಾನು ಕಷ್ಟಪಟ್ಟು ಕೆಲಸ ಮಾಡಬೇಕಾದ ಅಗತ್ಯವೇನಿದೆ ? ನೀನು ಕೊಡುವೆನೆಂದ ಆ ಹತ್ತು ರೂಪಾಯಿಯಲ್ಲಿ ಒಂದು ರೂಪಾಯಿ ನೀನೆ ಇಟ್ಟುಕೊಂಡು, ಉಳಿದ ಒಂಬತ್ತು ರೂಪಾಯಿಗಳನ್ನು ನನಗೆ ಕೊಟ್ಟುಬಿಡು. ಒಂದು ರೂಪಾಯಿ ನಿನಗೇ ಲಾಭತಾನೆ ?" ಎಂದನು.

"ಅಬ್ಬ ಇವನೇ !" ಎಂದುಕೊಂಡು ಅಮ್ಮನವರು ಮಾಯ !






ಒಂದು ಕಾಲದಲ್ಲಿ ಲಕ್ಷ್ಮೀಪುರದಲ್ಲಿ ಒಬ್ಬ ಜಮೀನ್ದಾರನಿದ್ದನು. ಅವನ ಹೆಸರು ಸತ್ಯಮೂರ್ತಿ. ಅವನಿಗೆ ಕೃಷ್ಣಾಪುರದಲ್ಲಿ ಕೂಡಾ ಕೆಲವು ಹೊಲಗದ್ದೆಗಳಿದ್ದುವು. ಅಲ್ಲಿಯ ಕೆಲಸಗಳನ್ನು ನೋಡಿಕೊಳ್ಳಲು ವೆಂಕಯ್ಯನೆಂಬ ಒಕ್ಕಲಿಗನೊಬ್ಬನನ್ನು ನಿಯಮಿಸಿದ್ದನು. ವೆಂಕಯ್ಯನು ವಿಶ್ವಾಸಾರ್ಹನಾಗಿದ್ದನು. ಗಟ್ಟಿಗನಾದ ಕೆಲಸಗಾರನೂ ಹೌದು. ಆದುದರಿಂದ ಜಮೀನ್ದಾರನು ಲಕ್ಷ್ಮೀಪುರದಿಂದ ಆವನಿಗೆ ಸಹಾಯಕನಾಗಿ ಯಾರನ್ನೂ ಕಳುಹಿಸಬೇಕಾಗಿರಲಿಲ್ಲ.

ಬೇಸಾಯದ ಕೆಲಸಕ್ಕಾಗಿ ಜಮೀನ್ದಾರನು ಬೆಲೆಬಾಳುವ ಎರಡು ಬಲಿಷ್ಠ ಕೋಣಗಳನ್ನು ಕೊಂಡುಕೊಂಡು ಅವುಗಳನ್ನು ವೆಂಕಯ್ಯನ ಬಳಿಗೆ ಕಳುಹಿಸಿದ್ದನು. ವೆಂಕಯ್ಯನು ಆ ಕೋಣಗಳನ್ನು ಚೆನ್ನಾಗಿಯೇ ಪೋಷಿಸುತ್ತಿದ್ದನು. ಹೊತ್ತು ಹೊತ್ತಿಗೆ ಕಲಗಚ್ಚು ಇಡುತ್ತ, ಹುಲ್ಲು ಹಾಕುತ್ತ, ಬಿಸಿಲು ವೇಳೆಯಲ್ಲಿ ಕೆರೆಯ ಕಡೆಗೆ ಸಾಗಿಸಿಕೊಂಡು ಹೋಗಿ ಆ ಕೋಣಗಳನ್ನು ಶುಭ್ರವಾಗಿ ಮೀಯಿಸುತ್ತಿದ್ದನು. ಅಂತಲೇ ಅವುಗಳು ಆರೋಗ್ಯದಿಂದ ಬಲವಾಗಿದ್ದು, ಎಂತಹ ಭಾರವನ್ನಾದರೂ ನಿರಾಯಾಸವಾಗಿ ಎಳೆಯುತ್ತಿದ್ದುವು. ಅವುಗಳಿಗೆ ಸಾಟಿಯಾದ ಕೋಣಗಳು ಸುತ್ತುಮುತ್ತ ಎಲ್ಲಿಯೂ ಇಲ್ಲವೆಂಬ ಹೆಸರು ಬಂದಿತ್ತು. ವೆಂಕಯ್ಯನು ಅವುಗಳಿಗೆ ಮುದ್ದಿನಿಂದ "ದಿವಾಣದ ಕೋಣಗಳು" ಎಂದು ಹೆಸರಿಟ್ಟಿದ್ದನು.

ಜಮೀನ್ದಾರನ ಬಾವನಾಗಿದ್ದ ಕುಮಾರಯ್ಯನೆಂಬವನು ಕೃಷ್ಣಾಪುರದ ಹೊಲಗದ್ದೆಗಳ ಪೈರು ಸಂಬಂಧದ ಲೆಕ್ಕಗಳನ್ನು ಬರೆಯುವವನಾಗಿದ್ದನು. ಅವನು ತಪ್ಪು ಲೆಕ್ಕಗಳನ್ನು ಬರೆದು ಹಣವನ್ನು ಎತ್ತಿ ಹಾಕುವ ಉಪಾಯಗಳನ್ನು ಮಾಡಿಕೊಂಡಿದ್ದನು. ಆದರೆ ವೆಂಕಯ್ಯನ ಪ್ರಾಮಾಣಿಕತೆಯ ಕಾರಣದಿಂದ ಅವನ ತಂತ್ರಗಳು ನಡೆಯುತ್ತಿರಲಿಲ್ಲ. ಆದುದರಿಂದ ವೆಂಕಯ್ಯನ ಮೇಲೆ ಅವನಿಗೆ ತುಂಬಾ ದ್ವೇಷವಿದ್ದಿತು.

ಒಂದು ದಿನ ಬತ್ತದ ಚೀಲಗಳನ್ನು ತುಂಬಿಸಿದ ಭಾರವಾದ ಗಾಡಿಯೊಂದು ಕೃಷ್ಣಾಪುರದಲ್ಲಿ ಸಾಗುತ್ತ, ಜಮೀನ್ದಾರನ ಹೊಲದ ಪಕ್ಕದಲ್ಲಿದ್ದ ನೀರಿನ ತೋಡಿನಲ್ಲಿ ಸಿಕ್ಕಿ ಹಾಕಿಕೊಂಡಿತು. ಅಕ್ಕಪಕ್ಕಗಳ ಗದ್ದೆಯಲ್ಲಿ ಕೆಲಸ ಮಾಡಿಕೊಂಡಿದ್ದ ಆಳುಗಳು ಬಂದು, ಕೆಸರಿನಲ್ಲಿ ಇಳಿದಿದ್ದ ಗಾಡಿಯ ಚಕ್ರಗಳನ್ನು ಹಿಡಿದು ಎತ್ತು ಪ್ರಯತ್ನಿಸಿದರೂ, ಗಾಡಿಗೆ ಕಟ್ಟಿದ್ದ ಕೋಣಗಳು

ಆರ್. ಎಸ್. ನಾರಾಯಣಮೂರ್ತಿ

ಗಾಡಿಯನ್ನು ಎಳೆಯಲಾರದೆ ಹೋದುವು. ತುಸು ದೂರದಲ್ಲಿ ನಿಂತು ನೋಡುತ್ತಿದ್ದ ವೆಂಕಯ್ಯನಿಗೆ ಅವರ ಕಷ್ಟನೋಡಿ ಅಯ್ಯೋ ಅನಿಸಿತು. ಅವನು ಕೂಡಲೇ ಜಮೀನ್ದಾರನ ಕೋಣಗಳನ್ನು ತಂದು ಆ ಗಾಡಿಗೆ ಕಟ್ಟಿದನು. ಆ ಕೋಣಗಳು ಆಟದ ಹಾಗೆ ಗಾಡಿಯನ್ನು ತೀರಕ್ಕೆ ಎಳೆದು ತಂದುವು.

ಈ ಸಂಗತಿಯನ್ನು ತಿಳಿದು ಕುಮಾರಯ್ಯ ಲಕ್ಷ್ಮೀಪುರಕ್ಕೆ ಹೋಗಿ ಜಮೀನ್ದಾರನೊಂದಿಗೆ, "ನೋಡಿದಿರಾ ಬಾವಯ್ಯಾ, ಆ ಒಕ್ಕಲಿಗ ವೆಂಕಯ್ಯ ನಮ್ಮ ಕೋಣಗಳನ್ನು ದಾರೀಲಿ ಹೋಗುವವರ ಸಹಾಯಕ್ಕೆ ಕಳುಹಿಸುತ್ತಾನೆ. ನಾವು ಎಷ್ಟೋ ಖರ್ಚು ಮಾಡಿ ಅವುಗಳನ್ನು ಪೋಷಿಸುವಾಗ ಯಾರು ಯಾರ ಕೆಲಸಕ್ಕೆ ಅವುಗಳನ್ನು ಕೊಡಬಹುದೆ? ಇದು ನಮ್ಮ ಘನತೆಗೆ ಅವಮಾನವಲ್ಲವೇನು?" ಎಂದು ವೆಂಕಯ್ಯ ಬಹು ದೊಡ್ಡ ತಪ್ಪು ಮಾಡಿದನೆಂಬ ಧೋರಣೆಯಲ್ಲಿ ಮಾತಾಡಿದನು. ಜಮೀನ್ದಾರನು ಸಣ್ಣಗೆ ನಕ್ಕು, ಮೀಸೆಯನ್ನು ಹುರಿಮಾಡುತ್ತ, "ಹೌದು. ನಾನೂ ಕೇಳಿದೆ ತೋಡಿನ ಕೆಸರಿನಲ್ಲಿ ಹುಗಿದುಹೋದ ಗಾಡಿಯನ್ನು ನನ್ನ ಕೋಣಗಳು ಬದಿಗೆ ಎಳೆದುದನ್ನು ಕೇಳಿ ನನಗೆ ಬಹಳ ಹೆಮ್ಮೆ ಎನಿಸುತ್ತದೆ. ಈ ಸಂಗತಿ ಕೇಳಿದ ಕೂಡಲೇ ನನ್ನ ಘನತೆಗೆ ಮೆರುಗುಕೊಟ್ಟಂತಹ ಕೆಲಸ ಮಾಡಿದ ವೆಂಕಯ್ಯನಿಗೆ ಕೂಡಲೇ ಇಪ್ಪತ್ತೈದು ರೂಪಾಯಿಯ ಬಹುಮಾನ ಕೂಡಾ ಕಳಿಸಿದ್ದೇನೆ" ಎಂದನು. ಕುಮಾರಯ್ಯ ಅಪ್ರತಿಭನಾಗಿ ಮತ್ತೇನೂ ಮಾತಾಡದೆ ಕೃಷ್ಣಾಪುರಕ್ಕೆ ಹಿಂದಿರುಗಿದನು.

ಆಮೇಲೆ ಕೆಲವು ದಿನಗಳಲ್ಲಿ ಹಬ್ಬದಕಾಲ ಬಂತು. ಜಮೀನ್ದಾರನು ಆನಂದರಾಜನೆಂಬ ಸ್ನೇಹಿತನೊಬ್ಬ ನನ್ನು ಲಕ್ಷ್ಮೀಪುರಕ್ಕೆ ಕರಯಿಸಿಕೊಂಡಿದ್ದನು, ಆನಂದ ರಾಜನು ಒಂದು ವಾರದವರೆಗೆ ಜಮೀನ್ದಾರನ ಮನೆಯಲ್ಲಿದ್ದು, ಒಂದು ದಿನ ಒಬ್ಬ ಉದ್ಯೋಗಸ್ಥ ನೊಂದಿಗೆ ಜಮೀನ್ದಾರರ ವ್ಯವಸಾಯ ಕ್ಷೇತ್ರವನ್ನು ನೋಡುತ್ತ ಕೃಷ್ಣಾಪುರಕ್ಕೆ ಬಂದನು. ಅಲ್ಲಿ ಕುಮಾರಯ್ಯನೂ ಅವರೊಂದಿಗೆ ಸೇರಿದನು.



ಅವರು ಅಲ್ಲಿಗೆ ಬಂದಾಗ ವೆಂಕಯ್ಯನು ಆ ದಿವಾಣದ ಕೋಣಗಳನ್ನು ಹುಲ್ಲುಗಾವಲಿನಲ್ಲಿ ಕಟ್ಟುತ್ತಿದ್ದನು. "ವೆಂಕಯ್ಯ, ನಿನ್ನ ಕೈಯಲ್ಲೇ ಬೆಳೆದ ಈ ಕೋಣಗಳ ಬಲವನ್ನು ಕುರಿತು ಸುತ್ತುಮುತ್ತಲಿನವರು ಮಾತಾಡಿಕೊಳ್ಳುವುದನ್ನು ಕೇಳಿದ್ದೇನೆ" ಎಂದನು ಆನಂದರಾಜ.

ಅದನ್ನು ಕೇಳಿ ವೆಂಕಯ್ಯ ಸಂತೋಷದಿಂದ, "ಬಾಯಿಯಿಲ್ಲದ ಪಶುಗಳಲ್ಲವೇ ಸ್ವಾಮಿ? ಅವುಗಳಿಗೆ ಏನು ಬೇಕೆಂಬುದನ್ನು ನಾವೇ ಊಹಿಸಿ ಕಂಡುಕೊಳ್ಳಬೇಕು. ನನಗೆ ಹೆಚ್ಚೇನೂ ಜಮೀನ್ದಾರ್ರ ದಿವಾಣಕ್ಕೆ ಹೋಗುವ ಕೆಲಸವಿರುವುದಿಲ್ಲ. ಈ ಕೋಣಗಳನ್ನೇ ಜಮೀನ್ದಾರ್ರ ದಿವಾಣವೆಂದುಕೊಂಡು ಪ್ರಾಣಕ್ಕೆ ಸಮಾನವಾಗಿ ನೋಡಿಕೊಳ್ಳುತ್ತಿದ್ದೇನೆ" ಎಂದನು. ಆ ಮಾತುಗಳು ಕುಮಾರಯ್ಯನಿಗೆ ಸಹನವಾಗಲಿಲ್ಲ. ಅವನು ಆನಂದರಾಜನ ಜತೆಯಲ್ಲಿ ಜಮೀನ್ದಾರನ ಬಳಿಗೆ ಹೋಗಿ, "ಬಾವಯ್ಯಾ. ಆ ಒಕ್ಕಲಿಗ ವೆಂಕಯ್ಯನ ಬಾಯಿಗೆ ಲಂಗುಲಗಾಮಿಲ್ಲದೆ ಹೋಗಿದೆ. ನಮ್ಮ ದಿವಾಣದ ಕೋಣಗಳನ್ನು ಕುರಿತು ಬಾಯಿಗೆ ಬಂದ ಹಾಗೆ ಹೇಳುತ್ತಾನೆ. ಅವನ ದೃಷ್ಟಿಯಲ್ಲಿ ಕೋಣಗಳಿಗೂ, ದಿವಾಣಕ್ಕೂ ವ್ಯತ್ಯಾಸವೇನೂ ಇಲ್ಲ. ಬೇಕಾದರೆ ಆನಂದರಾಜರನ್ನೇ ಕೇಳಿ ನೋಡಿ" ಎಂದನು. ವೆಂಕಯ್ಯನೊಂದಿಗೆ ನಡೆದ ಸಂಭಾಷಣೆಯನ್ನು ಕುರಿತು ಆನಂದರಾಜನೂ ಜಮೀನ್ದಾರನೊಂದಿಗೆ ಹೇಳಿದನು.

ಆಗ ಜಮೀನ್ದಾರನು ಬಹಳ ಸಂತೋಷದಿಂದ, "ವೆಂಕಯ್ಯನು ಈ ಮಾತುಗಳನ್ನು ನನ್ನ ಹತ್ತಿರ ಕೂಡಾ ಒಂದೆರಡು ಬಾರಿ ಅಂದಿದ್ದಾನೆ. ಕೋಣಗಳನ್ನು ದಿವಾಣವೆಂದುಕೊಂಡು, ಅವುಗಳ ಪೋಷಣೆಯನ್ನು ಅಷ್ಟೊಂದು ಜಾಗರೂಕತೆಯಿಂದ ಮಾಡುತ್ತಾನೆಂದರೆ, ಅವನೆಷ್ಟು ವಿಶ್ವಾಸಪಾತ್ರನೆಂದು, ನೀನೇ ಆಲೋಚಿಸಿ ನೋಡು ಆನಂದರಾಜಾ. ನಮ್ಮ ದಿವಾಣದಲ್ಲಿ ಕಂಡ ಕಂಡ ಹಾಗೆ ಕಳ್ಳ ತಿಂಡಿ ತಿನ್ನುತ್ತ ಸಂದರ್ಭ ಬಂದಾಗ ಕಳ್ಳ ಲೆಕ್ಕ ಬರೆಯುವ ಕೋಣಗಳು ಕೆಲವಿವೆ. ಈ ಕಳ್ಳ ಕೋಣಗಳೆಂದರೆ ನನಗೆ ಅಸಹ್ಯ. ಸ್ವಲ್ಪ ಭಯವೂ ಇದೆ ಅನ್ನು!" ಎಂದನು.

ಆಮೇಲೆ ಕುಮಾರಯ್ಯನನ್ನು ನೋಡಿ, "ಬಾವಯ್ಯಾ, ನೀವು ಕೃಷ್ಣಾಪುರಕ್ಕೆ ಹೋದ ಕೂಡಲೇ, ಕೋಣಗಳನ್ನು ಚೆನ್ನಾಗಿ ಸಾಕಿದುದಕ್ಕೆ ನನ್ನ ಬಹುಮಾನವೆಂದು ಹೇಳಿ ವೆಂಕಯ್ಯನಿಗೆ ಇಪ್ಪತ್ತೈದು ರೂಪಾಯಿ ಕೊಟ್ಟುಬಿಡಿರಿ" ಎಂದನು.

ತನ್ನ ಉಪಾಯ ಬಿದ್ದು ಹೋದುದು ಸಾಲದೆ, ಇನ್ನೊಂದು ಇಪ್ಪತ್ತೈದು ಬಹುಮಾನ ಬೇರೆ ತನ್ನ ಕೈಯಿಂದಲೇ ಕೊಡಬೇಕಾಗಿ ಬಂದುದಕ್ಕೆ ಕುಮಾರಯ್ಯನಿಗೆ ಬಹಳ ಸಂಕಟವಾಯಿತು.






# ಗುರುವಿನ ಹೊಣೆ

ಬ್ರಹ್ಮದತ್ತ ರಾಜನು ಕಾಶೀರಾಜ್ಯವನ್ನು ಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ತಕ್ಷಶಿಲಾ ನಗರದಲ್ಲಿ ಶಿಲ್ಪಿ ಕುಲದಲ್ಲಿ ಹುಟ್ಟಿ, ಶಿಲ್ಪಾಚಾರ್ಯನೆಂದು ಪ್ರಸಿದ್ಧನಾಗಿದ್ದನು. ಆತನ ಹತ್ತಿರ ಶಿಲ್ಪ ವಿದ್ಯೆಯನ್ನು ಕಲಿಯಲು ದೇಶದ ನಾಲ್ಕು ಮೂಲೆಗಳಿಂದಲೂ ರಾಜಕುಮಾರರೂ ಇತರರೂ ಬಂದು ಕಲಿತು ಜಾಣರಾಗಿ ಹೋಗುತ್ತಿದ್ದರು.

ತಕ್ಷಶಿಲಾ ನಗರದಲ್ಲಿರುವ ಶಿಲ್ಪಾಚಾರ್ಯನ ಖ್ಯಾತಿಯನ್ನು ಕೇಳಿ ಕಾಶೀರಾಜನು ತನ್ನ ಮಗನನ್ನು ಕೂಡಾ ವಿದ್ಯಾಭ್ಯಾಸಕ್ಕಾಗಿ ಆತನ ಬಳಿಗೆ ಕಳುಹಿಸುವುದು ಒಳ್ಳೆಯದೆಂದುಕೊಂಡನು.

ಆಗ ರಾಜಕುಮಾರನಿಗೆ ಹದಿನಾರು ವರ್ಷ ಪ್ರಾಯ ಕೂಡಾ ತುಂಬಿರಲಿಲ್ಲ. ರಾಜಕುಮಾರನು ಒಬ್ಬಂಟಿಯಾಗಿ, ದೂರದಲ್ಲಿರುವ ತಕ್ಷಶಿಲೆಗೆ ಹೋಗಿ ಅಲ್ಲಿ ಗುರು ಶುಶ್ರೂಷೆ ಮಾಡಿ ವಿದ್ಯಾಭ್ಯಾಸ ಮಾಡುವುದು ಮಂತ್ರಿಗಳಿಗೂ ಸಾಮಂತರಿಗೂ ಇಷ್ಟವಿರಲಿಲ್ಲ.

"ಮಹಾರಾಜಾ, ಶಿಲ್ಪ ವಿದ್ಯೆಯಲ್ಲಿ ತುಂಬಾ ಗಟ್ಟಿಗರಾದವರು ನಮ್ಮ ನಗರದಲ್ಲೇ ಇರುವಾಗ ಯುವರಾಜರನ್ನು ತಕ್ಷಶಿಲೆಗೆ ಕಳುಹಿಸುವ ಅಗತ್ಯವೇನಿದೆ ?" ಎಂದು ಮಂತ್ರಿಗಳು ಕೇಳಿದರು.

ರಾಜನಿಗೆ ಅವರ ಅಭಿಪ್ರಾಯ ಹಿಡಿಸಲಿಲ್ಲ. ರಾಜಧಾನಿಯಲ್ಲಿ ತನ್ನ ಕುಮಾರನು, ಭಾವೀ ರಾಜನೆಂಬ ಭಾವನೆಯನ್ನು ಎಲ್ಲರಲ್ಲಿಯೂ ಉಂಟಾಗಿಸುತ್ತ ನಿಜವಾದ ವಿದ್ಯೆಯನ್ನು ಕಲಿಯಲು ಸಾಧ್ಯವಾಗಲಾರದೆಂದು ರಾಜನ ಅಭಿಪ್ರಾಯವಾಗಿತ್ತು. ಅಂತಲೇ ರಾಜನು ದೃಢಚಿತ್ತನಾಗಿ ತನ್ನ ಮಗನಿಗೆ ಒಂದು ಜತೆ ಮೆಟ್ಟು ಮತ್ತು ಒಂದು ಓಲೆ ಕೊಡೆ ಮಾತ್ರವೇ ಕೊಟ್ಟು, "ನೀನು ತಕ್ಷಶಿಲಾ ನಗರಕ್ಕೆ ಹೋಗಿ, ಅಲ್ಲಿಯ ಶಿಲ್ಪಾಚಾರ್ಯರ ಬಳಿಯಲ್ಲಿ ಶ್ರದ್ಧೆಯಿಂದ ವಿದ್ಯಾಭ್ಯಾಸ ಮಾಡಿ, ತೇರ್ಗಡೆಯಾದ ಮೇಲೆ ಹಿಂದಿರುಗಿ ಬಾ! ಅವರಿಗೆ ಗುರುದಕ್ಷಿಣೆ ಕೊಡಲು ಸಾವಿರ ಬೆಳ್ಳಿ ನಾಣ್ಯಗಳನ್ನೂ ತೆಗೆದುಕೊಂಡು ಹೋಗು. ಅಲ್ಲಿರುವಾಗ ನಿನಗೆ ನೀನೇ ಎಚ್ಚರಿಕೆ ಹೇಳಿಕೊಂಡಿರಬೇಕು." ಎಂದನು.

ರಾಜಕುಮಾರನು ತಂದೆಯ ಆಜ್ಞೆಯಂತೆ ಒಬ್ಬಂಟಿಗನಾಗಿ ಹೊರಟು, ಸಾವಿರ ಬೆಳ್ಳಿ ನಾಣ್ಯಗಳ ಮೂಟೆಯನ್ನು ಹೊತ್ತುಕೊಂಡು, ಆಯಾಸವಾದಾಗ



ಯಾವ ಮರದ ಕೆಳಗೋ ವಿಶ್ರಮಿಸುತ್ತ ಬಹಳ ಕಷ್ಟಪಟ್ಟು ತಕ್ಷಶಿಲೆಯನ್ನು ತಲಪಿದನು.

ಅಲ್ಲಿ ಅವನು ಶಿಲ್ಪಾಚಾರ್ಯನನ್ನು ಸಂಧಿಸಿ ತಾನು ಬಂದ ಕಾರ್ಯವನ್ನು ಹೇಳಿ ಸಾವಿರ ನಾಣ್ಯಗಳನ್ನು ಗುರುದಕ್ಷಿಣೆಯಾಗಿ ಸಮರ್ಪಿಸಿ, ಆತನ ಹತ್ತಿರ ವಿದ್ಯಾಭ್ಯಾಸಕ್ಕೆ ಪ್ರಾರಂಭಿಸಿದನು. ರಾಜಕುಮಾರನಾದರೂ ಮನಸ್ಸು ಕೊಟ್ಟೇ ವಿದ್ಯೆ ಕಲಿತನು. ಶಿಲ್ಪ ವಿದ್ಯೆಗಳ ಅಭ್ಯಾಸವೂ ಚೆನ್ನಾಗಿಯೇ ನಡೆಯಿತು. ಆವನ ಬುದ್ಧಿ ಸೂಕ್ಷ್ಮತೆಗಳು ಗುರುವನ್ನು ತುಂಬಾ ಮೆಚ್ಚಿಸಿದುವು.

ಕಾಲ ಕಳೆಯುತ್ತಿತ್ತು. ಗುರು ಶಿಷ್ಯರು ಪ್ರತಿದಿನ ಬೆಳಗ್ಗೆ ಊರ ಹೊರಗಿರುವ ನದಿಗೆ ಹೋಗಿ ಸ್ನಾನ ಮಾಡಿ ಬರುವ ಪರಿಪಾಠವಿದ್ದಿತು. ಒಂದು ದಿನ ಅವರು ಸ್ನಾನ ಮಾಡುವ ಸಮಯದಲ್ಲಿ, ಒಬ್ಬಳು ಮುದುಕಿ ಸ್ವಲ್ಪ ಎಳ್ಳು ತಂದು ನೀರಿನಲ್ಲಿ ತೊಳೆದು ಶುಭ್ರ ಮಾಡಿ, ನದಿಯ ಬದಿಯ ನೆಲದಲ್ಲಿ ವಸ್ತ್ರ ಹಾಕಿ ತೊಳೆದ ಎಳ್ಳನ್ನು ಅದರಲ್ಲಿ ಹರಡಿಸಿ ಆರ ಹಾಕಿ ತಾನು ಸ್ವಲ್ಪ ದೂರದಲ್ಲಿ ಕುಳಿತುಕೊಂಡಳು.

ರಾಜಕುಮಾರನು ಎಳ್ಳನ್ನು ನೋಡಿ, ಬೇಗನೇ ಸ್ನಾನ ಮುಗಿಸಿ ತೀರಕ್ಕೆ ಬಂದನು. ಮುದುಕಿ ಸಮಯ ಸಾಧಿಸಿ ರಾಜಕುಮಾರನು ಒಂದು ಪರಧ್ಯಾನದಲ್ಲಿರುವ ಹಾಗೆ ಕಾಣುತ್ತಿತ್ತು. ಅದೇ ಮುಷ್ಟಿ ಎಳ್ಳು ತೆಗೆದು ಬಾಯಿಯೊಳಗೆ ಹಾಕಿಕೊಂಡು ಜಗಿಯುತ್ತಾ ಅಲ್ಲಿಂದ ಹೊರಡುವಾಗ ಮುದುಕಿ ಅದನ್ನು ನೋಡಿಬಿಟ್ಟಳು. ಆದರೆ ಏನೂ ಹೇಳದೆ ಸುಮ್ಮನಿದ್ದಳು.

ಮಾರನೇ ದಿನ ಕೂಡಾ ಅದೇ ಮುದುಕಿ ಹಿಂದಿನ ದಿನದಂತೆಯೇ ಎಳ್ಳು ತೊಳೆದು ಆರ ಹಾಕಿದಳು, ರಾಜಕುಮಾರನು ಮೊದಲಿನಂತೆಯೇ ಒಂದು ಹಿಡಿ ಎಳ್ಳು ಕದ್ದು ತಿಂದನು. ಮುದುಕಿ ಅದನ್ನು ನೋಡಿದರೂ ನೋಡದಂತೆಯೇ ಸುಮ್ಮನಿದ್ದಳು. ಮೂರನೆಯ ದಿನವೂ ಹಾಗೆಯೇ ನಡೆಯಿತು. ಅಷ್ಟು ಹುಡುಗರಲ್ಲಿ ಈ ಒಬ್ಬ ಹುಡುಗನ ಕಳ್ಳ ಬುದ್ಧಿ ನೋಡಿ ಮುದುಕಿಗೆ ಕೋಪ ಬಂದಿತು. ಇನ್ನು ಸುಮ್ಮನಿರಬಾರದೆಂದುಕೊಂಡಳು.

ಶಿಲ್ಪಾಚಾರ್ಯನು ಸ್ನಾನ ಮುಗಿಸಿ ತೀರಕ್ಕೆ ಬಂದ ಕೂಡಲೇ ಆ ಮುದುಕಿ ಆತನ ಹತ್ತಿರ ಬಂದು "ನೋಡಿರಿ ಸ್ವಾಮಿ, ಮೂರು ದಿನಗಳಿಂದ ನಿಮ್ಮ ಒಬ್ಬ ಶಿಷ್ಯ ನನ್ನ ಎಳ್ಳನ್ನು ಒಂದಿಷ್ಟು ಕದ್ದು ತೆಗೆದು ತಿನ್ನುತ್ತಾನೆ. ಎಳ್ಳು ಹೋಗುವುದಕ್ಕೆ ನನಗೇನೂ ಚಿಂತೆಯಿಲ್ಲವಾದರೂ, ಅವನು ಕಳ್ಳಬುದ್ಧಿಯಲ್ಲಿ ಪಳಗುತ್ತಾ ಬರುವುದು ಅವನಿಗೂ ಒಳ್ಳೆಯದಲ್ಲ. ನಿಮ್ಮ ಹೆಸರಿಗೂ ಕಳಂಕ. ಇನ್ನೆಂದಿಗೂ ಹೀಗೆ ಮಾಡಬಾರದೆಂದು ನೆನಪಿರುವ ಹಾಗೆ ಏನಾದರೂ ಮಾಡಿಬಿಡಿ" ಎಂದಳು.

ಮನೆಗೆ ಹೋದ ಕೂಡಲೇ ಶಿಲ್ಪಾಚಾರ್ಯನು ರಾಜಕುಮಾರನ ಕೈಗಳನ್ನು ಗಟ್ಟಿಯಾಗಿ ಹಿಡಿದು

ಕೊಳ್ಳುವಂತೆ ಇತರ ಶಿಷ್ಯರಿಗೆ ಹೇಳಿದನು. ಆಮೇಲೆ ಅವನ ಬೆನ್ನಿಗೆ ಮೂರು ಪೆಟ್ಟುಗಳನ್ನು ಕೊಟ್ಟು, "ಮೂರು ದಿನ ಮಾಡಲಾಗದಂತಹ ಎಳ್ಳು ಕದ್ದು ತಿಂದ ತಪ್ಪಿಗೆ ಇದು ಶಿಕ್ಷೆ. ಇನ್ನೆಂದೂ ಹೀಗೆ ಮಾಡಬೇಡ !" ಎಂದನು ಶಿಲ್ಪಾಚಾರ್ಯ.

ರಾಜಕುಮಾರನಿಗೆ ಗುರುವಿನ ಮೇಲೆ ಹಿಡಿಸಲಾಗದಷ್ಟು ಕೋಪಬಂತು. ಆದರೆ ಈಗ ಅವನು ಕಾಶೀ ಯುವರಾಜನೆಂಬ ಭಾವನೆಯನ್ನು ತೋರಿಸುವಂತಿಲ್ಲ. ಇಲ್ಲಿ ಎಲ್ಲ ಶಿಷ್ಯರಂತೆಯೇ ಅವನೂ ಒಬ್ಬ ಶಿಷ್ಯ ಅಷ್ಟೇ. ಶಿಷ್ಯನನ್ನು ದಂಡಿಸುವ ಅಧಿಕಾರ ಗುರುವಿಗೆ ಇದ್ದೇಯಿದೆ.

"ಇರಲಿ. ನಾನು ರಾಜನಾದ ಮೇಲೆ ಈ ದುಷ್ಟನಿಗೆ ಶಾಸ್ತಿ ಮಾಡುತ್ತೇನೆ. ಏನೋ ಒಂದು ಕಾರಣದಿಂದ ರಾಜ್ಯಕ್ಕೆ ಕರೆಯಿಸಿ, ಕೊಲ್ಲಿಸದೇ ಬಿಡಲಾರೆ !" ಎಂದು ರಾಜಕುಮಾರನು ಆಗಲೇ ಮನಸ್ಸಿನಲ್ಲಿ ಶಪಥ ಹಾಕಿಕೊಂಡನು.



ಕಾಲಕ್ರಮದಲ್ಲಿ ರಾಜಕುಮಾರನ ವಿದ್ಯಾಭ್ಯಾಸವೆಲ್ಲ ಮುಗಿಯಿತು. ಅವನು ಗುರುವಿನಿಂದ ಆಶೀರ್ವಾದ ಪಡೆದು ಹೊರಡುವ ಮೊದಲು, ಗುರುವಿನೊಂದಿಗೆ, "ಅಯ್ಯಾ, ನಾನು ರಾಜನಾಗಿ ಪಟ್ಟಾಭಿಷಿಕ್ತನಾದ ಮೇಲೆ ತಾವು ಒಂದು ಸಾರಿ ಕಾಶೀನಗರಕ್ಕೆ ದಯಮಾಡಿ ಬರಬೇಕು. ಆಗ ನಾನು ಯಥೋಚಿತವಾಗಿ ತಮ್ಮನ್ನು ಸತ್ಕರಿಸುತ್ತೇನೆ" ಎಂದನು. ಶಿಷ್ಯನ ಆಹ್ವಾನವನ್ನು ಗುರು ಶಿಲ್ಪಾಚಾರ್ಯನು ಸಂತೋಷವಾಗಿ ಅಂಗೀಕರಿಸಿ ಕೊಂಡನು.

ಅವನು ಕಾಶೀನಗರಕ್ಕೆ ಹೊರಟುಹೋದ ಮೇಲೆ ಎರಡು ವರ್ಷ ಕಳೆಯುವದರೊಳಗೇ ಯುವರಾಜನಿಗೆ ಪಟ್ಟಾಭಿಷೇಕವಾಗಿ, ತಾನೇ ರಾಜನಾದನು. ಅವನು ತನ್ನ ಗುರುವನ್ನು ಮರತಿರಲಿಲ್ಲ. ಒಂದು ದಿನ ತನ್ನ ನೌಕರನನ್ನು ಕರೆದು, "ನೀನು ತಕ್ಷಶಿಲಾ ನಗರಕ್ಕೆ ಹೋಗಿ, ಅಲ್ಲಿರುವ ವಿದ್ಯಾಲಯದ ಶಿಲ್ಪಾಚಾರ್ಯನನ್ನು ನೋಡಿ, ಅವರಿಗೆ ನನ್ನ ಈ ಆಹ್ವಾನ ಪತ್ರವನ್ನು ಕೊಡು" ಎಂದು ಹೇಳಿ ಕಳುಹಿಸಿದನು.

ಶಿಲ್ಪಾಚಾರ್ಯನು ತನ್ನ ಶಿಷ್ಯನಾದ ರಾಜನು ಆಹ್ವಾನಪತ್ರವನ್ನು ಪಡೆದುಕೊಂಡು ಕೂಡಲೇ ಹೊರಟು ಬಿಡಲಿಲ್ಲ. ಈಗ ತಾನೇ ಪಟ್ಟಾಭಿಷೇಕವಾದುದರಿಂದ ರಾಜನು ಸಿಂಹಾಸನ ವೇರಿದ ಉತ್ಸಾಹ ಸಂಭ್ರಮದಲ್ಲಿರುತ್ತಾನೆ. ರಾಜ್ಯಭಾರವು ಎಂತಹುದೆಂದು ತಿಳಿದು ಬಂದ ಮೇಲೆ ಹೋಗೋಣವೆಂದು ಕೊಂಡನು ಶಿಲ್ಪಾಚಾರ್ಯ.

ಆದರಂತೆ ಒಂದು ತಿಂಗಳು ಕಳೆದ ಮೇಲೆ ಒಂದು ದಿನ ಶಿಲ್ಪಾಚಾರ್ಯನು ಕಾಶೀನಗರಕ್ಕೆ ಹೊರಟು ಬಂದು ತನ್ನ ಶಿಷ್ಯ ರಾಜನನ್ನು ನೋಡಲು ಅರಮನೆಯೊಳಗೆ ಪ್ರವೇಶಿಸಿದನು. ರಾಜನ ಗುರುಗಳು ಬಂದರೆಂದು ಸಭಾಸದರು ಶಿಲ್ಪಾಚಾರ್ಯನನ್ನು ತುಂಬಾ ಮರ್ಯಾದೆಯಿಂದ ಸ್ವಾಗತಿಸಿ ಉನ್ನತಾಸನವನ್ನು ಕೊಟ್ಟು ಕೂಡಿಸಿದರು.

ಗುರುವನ್ನು ನೋಡಿದ ಕ್ಷಣದಿಂದಲೂ ರಾಜನಿಗೆ ತನ್ನ ಹಳೆಯ ಹಗೆ ನೆನಪಾಗಿ ಕೋಪವು ಉಕ್ಕುಕ್ಕಿ ಬರುತ್ತಿದ್ದಿತು. ಅವನು ಮಾತಿನ ಮಧ್ಯದಲ್ಲಿ ಗುರುವನ್ನು ತೀಕ್ಷ್ಣವಾಗಿ ನೋಡುತ್ತ, "ಒಂದು ಮುಷ್ಟಿ ಎಳ್ಳು ತಿಂದನೆಂದು ಶಿಕ್ಷಿಸಿದವನು ಕೈಗೆ ಸಿಕ್ಕಿದಾಗ ಯಾವನಾದರೂ ಸುಮ್ಮನೆ ಬಿಡುವನೆಂದು ತಿಳಿಯುವಿರೇನು ?" ಎಂದು ಕೇಳಿದನು.

ಸಭೆಯಲ್ಲಿರುವ ಯಾರಿಗೂ ಅರ್ಥವಾಗದಂತೆ ಶಿಲ್ಪಾಚಾರ್ಯನಿಗೆ ಮರಣಭಯವನ್ನು ಕಲ್ಪಿಸಿ, ಆಮೇಲೆ ಸಮಯಸಾಧಿಸಿ ಕೊಂದುಬಿಡಬೇಕೆಂದು ಈ ಹೊಸ ರಾಜನ ಉದ್ದೇಶವಾಗಿತ್ತು.

ಆದರೆ ರಾಜನು ಅಂದುಕೊಂಡಂತೆ ಶಿಲ್ಪಾಚಾರ್ಯನು ಸ್ವಲ್ಪವೂ ಹೆದರಲಿಲ್ಲ. ಅದರ ಬದಲಿಗೆ ರಾಜನ ರಹಸ್ಯವನ್ನು ಬಯಲು ಪಡಿಸುವ ವಿಧವಾಗಿ ಹೀಗೆ ಹೇಳಿದನು :

"ಅಯ್ಯಾ ರಾಜಾ ! ಹೊಣೆಗಾರಿಕೆಯ ರಾಜ ಪದವಿಗೆ ತಕ್ಕ ಯೋಗ್ಯತೆ ಬಂದುದರಿಂದಲೇ ನೀನು ಪವಿತ್ರ ಸಿಂಹಾಸನವನ್ನೇರಿರುವಿ. ನೀನು ನನ್ನ ಶಿಷ್ಯನಾಗಿರುವಾಗ ನೀನು ನಿನ್ನ ಯೋಗ್ಯತೆಗೆ ಸಲ್ಲದ ಕೆಲಸವನ್ನು ಮಾಡಿದಿ. ಶಿಷ್ಯನ ದುಷ್ಪ್ರವರ್ತನೆಗೆ, ನೆನಪಿರುವಂತೆ ದಂಡಿಸಿ ಸನ್ಮಾರ್ಗದಲ್ಲಿರಿಸಬೇಕಾದ್ದು ಗುರುವಿನ ಹೊಣೆ. ನಿನ್ನನ್ನು ಆ ದಿನ ಶಿಕ್ಷಿಸದೆ ಬಿಟ್ಟಿದ್ದರೆ ನೀನು ಇಷ್ಟು ಹೊತ್ತಿಗೆ ಕಾಶೀರಾಜ್ಯಕ್ಕೆ ರಾಜನಾಗುವುದಕ್ಕೆ ಬದಲಾಗಿ ಕಳ್ಳರ ಗುಂಪಿಗೆ ರಾಜನಾಗುತ್ತಿದ್ದಿ. ಬುದ್ಧಿವಂತನಾದವನು ತಪ್ಪಿಗೆ ತಕ್ಕ ದಂಡನೆ ಕೊಟ್ಟವರ ಮೇಲೆ ಎಂದೆಂದೂ ಕೃತಜ್ಞನಾಗಿರುತ್ತಾನೆ. ನೀನು ಅಂತಹ ಸಜ್ಜನನಾದುದರಿಂದಲೇ ರಾಜನ ಹೊಣೆಯನ್ನು ಹೊತ್ತಿರುವಿ. ನನ್ನ ನೆನಪಿಲ್ಲದಿದ್ದರೆ ಆಹ್ವಾನ ಕಳುಹಿಸುವೆಯಾ ?"

ಅಸಲು ವಿಷಯ ಸಭೆಯವರಿಗೆಲ್ಲಾ ಗೊತ್ತಾಗಿ, ಎಲ್ಲರೂ ಬೆರಗುವಡೆದು ನೋಡುತ್ತಿರಲು, ರಾಜನ ಕೋಪವೂ ಹಗೆಯೂ ಗಾಳಿಯಾಗಿ ಹಾರಿಹೋಯಿತು. ಅವನು ಸಿಂಹಾಸನದಿಂದ ಇಳಿದು ಬಂದು ಗುರುವಿನ ಕಾಲು ಹಿಡಿದು, "ಮಹಾನುಭಾವಾ ! ನೀವು ಆಗ ಮಾತ್ರ ಶಿಕ್ಷಕರಾಗಿ ನನ್ನನ್ನು ತಿದ್ದಿದಿರಿ. ಈಗಲೂ ಅದೇ ರೀತಿಯಾಗಿ ತಿದ್ದಿದಿರಿ. ನನ್ನ ಕಣ್ಣು ತೆರೆಸಿದ ನಿಮಗೆ ಎಂದೆಂದೂ ಕೃತಜ್ಞನಾಗಿರುತ್ತೇನೆ. ಕ್ಷಮಿಸಿರಿ ಸ್ವಾಮಿ !" ಎಂದನು.

ನಿರ್ಮಲ ಮನಸ್ಸಿನವನಾದ ರಾಜನಿಂದ ಗುರು ಶಿಲ್ಪಾಚಾರ್ಯನಿಗೆ ಭಾರಿ ಸನ್ಮಾನ ಜರುಗಿತು. ಅನಂತರ ರಾಜನು ಆಗಾಗ ಜಟಿಲಸಮಸ್ಯೆ ಬಂದಾಗ ಆ ಗುರುವಿನ ಬಳಿಗೆ ಹೋಗಿ ಸರಿಯಾದ ದಾರಿಯನ್ನು ತಿಳಿದು ಧರ್ಮದಿಂದ ರಾಜ್ಯಪಾಲನೆ ಮಾಡುತ್ತ ಖ್ಯಾತನಾದನು.





# ಪೃಥ್ವೀರಾಜ ಮತ್ತು ಸಂಯುಕ್ತೆ–೨

ವೃದ್ಧದಾಸಿ ಕನೋಜವನ್ನು ಸೇರಿ ಮೊದಲು ಸಂಯುಕ್ತೆಯ ಗೆಳತಿಯರ ಪರಿಚಯ ಮಾಡಿ ಕೊಂಡಳು. ಅವರು ಅವಳನ್ನು ಸಂಯುಕ್ತೆಯ ಬಳಿಗೆ ಕರೆದುಕೊಂಡು ಹೋದರು. ದಾಸಿಯ ಮಾತುಗಳೂ, ಒಳ್ಳೆಯ ತನವೂ ಸಂಯುಕ್ತೆ ಯನ್ನು ತುಂಬಾ ಆಕರ್ಷಿಸಿದುವು.

ಆ ದಾಸಿ ಸಂಯುಕ್ತೆಗೆ ಪರಿಚರ್ಯೆ ಮಾಡುವಾಗ ಸಮಯಸಾಧಿಸಿ ಪೃಥ್ವಿರಾಜನ ವೀರಕೃತ್ಯಗಳನ್ನು ಕುರಿತು ಹೇಳತೊಡಗಿದಳು. ಅದರಿಂದ ಕೆಲವು ದಿನಗಳಲ್ಲಿ ಸಂಯುಕ್ತೆಗೆ ಪೃಥ್ವಿರಾಜನ ಮೇಲೆ ಅನುರಾಗವೇರ್ಪಟ್ಟಿತು.







ದಾಸಿ ತನ್ನೊಂದಿಗೆ ಪೃಥ್ವೀರಾಜನ ಒಂದು ಚಿತ್ರ ಪಟವನ್ನೂ ತಂದು ಅಡಗಿಸಿಟ್ಟಿದ್ದಳು. ಒಂದು ದಿನ ಅದನ್ನು ತೋರಿಸಿದಾಗ, ಹಿಂದೆ ಎಂದೋ ತಾನು ಅವನನ್ನು ಅಜ್ಮೀರ ಭವನದಲ್ಲಿ ನೋಡಿದ ನೆನಪು ಸಂಯುಕ್ತೆಗಾಯಿತು. ಇನ್ನು ಅವನ ಹೊರತು ಬೇರೆಯಾರನ್ನೂ ಮದುವೆಯಾಗ ಲಾರೆನೆಂದು ನಿಶ್ಚಯಿಸಿಕೊಂಡಳು.



ರಾಜಾ ಜಯಚಂದ್ರನು ವಾರ್ತಾವಾಹಕರ ಮೂಲಕ, ವಿವಾಹಕ್ಕೆ ಯೋಗ್ಯರಾದ ರಾಜ ಕುಮಾರರಿಗೆ ಸಂಯುಕ್ತೆಯ ಸ್ವಯಂವರಕ್ಕೆ ಬರಬೇಕೆಂದು ಆಮಂತ್ರಣ ಕಳುಹಿಸಿದನು. ಕನೋಜನಗರದ ಪೌರರು ಸ್ವಯಂವರದ ದಿನ ವನ್ನು ಅತ್ಯುತ್ಸಾಹದಿಂದ ಇದಿರು ನೋಡ ತೊಡಗಿದರು.

ಸ್ವಯಂವರಕ್ಕೆ ಅನೇಕಮಂದಿ ರಾಜಕುಮಾರರು ಬಂದರು. ಸಂಯುಕ್ತೆ ಗೆಳತಿಯರ ಮೂಲಕವಾಗಿ, ಮಂತ್ರಿಯನ್ನು ವಿಚಾರಿಸಿ ಪೃಥ್ವೀರಾಜನಿಗೆ ಆಹ್ವಾನ ಕಳುಹಿಸಲಿಲ್ಲವೆಂಬುದನ್ನು ತಿಳಿದು ಕೊಂಡಳು.





ಸಂಯುಕ್ತೆಯ ಗೆಳತಿಯರು ಜಯಚಂದ್ರನ ಬಳಿಗೆ ಬಂದು, ಪೃಥ್ವೀರಾಜನನ್ನು ಕೂಡಾ ಆಹ್ವಾನಿಸಬೇಕೆಂದು ಸಂಯುಕ್ತೆಯ ಬಯಕೆ ಯನ್ನು ತಿಳಿಸಿದರು. ಅದಕ್ಕೆ ಜಯಚಂದ್ರನು ಗೇಲಿಯಾಗಿ, "ಅವನು ಕೂಡಾ ಯಾವುದೋ ರೂಪದಲ್ಲಿ ಸ್ವಯಂವರಕ್ಕೆ ಬರುವಂತೆ ಮಾಡುತ್ತೇನೆ" ಎಂದನು. ತನ್ನ ತಂದೆಗೆ ಪೃಥ್ವೀ ರಾಜನ ಮೇಲಿರುವ ಕೋಪವನ್ನು ತಿಳಿದ ಸಂಯುಕ್ತೆ ಚಿಂತಾಕ್ರಾಂತಳಾದಳು.

ಗೆಳತಿಯರೊಂದಿಗೆ ಸ್ವಯಂವರ ಮಂಟಪದೊಳಗೆ ಬರುತ್ತ ಸಂಯುಕ್ತೆ ದ್ವಾರದ ಹತ್ತಿರವಿದ್ದ ಪೃಥ್ವೀರಾಜನ ಪ್ರತಿಮೆಯನ್ನು ನೋಡಿದಳು. ಅದು ದ್ವಾರಪಾಲಕನ ದುಸ್ತಿನಲ್ಲಿ ಕಾಣುತ್ತಿದ್ದಿತು. ಸಂಯುಕ್ತೆ ಕ್ಷಣಮಾತ್ರ ಬೆರಗಾಗಿ, ಮರುಕ್ಷಣದಲ್ಲಿ ಯಾವುದೋ ಒಂದು ದೃಢ ನಿಶ್ಚಯಕ್ಕೆ ಬಂದಳು.





ವಲಯಾಕಾರದಲ್ಲಿರುವ ಸ್ವಯಂವರ ಮಂಟಪದಲ್ಲಿ ಆಸೀನರಾಗಿದ್ದ ರಾಜಕುಮಾರರು ಮಂದಹಾಸ ಬೀರಿಕೊಂಡಿದ್ದರು. ಅವರು ಯಾರೆಂದು ಪ್ರಧಾನ ಸಖಿ ಸಂಯುಕ್ತೆಗೆ ಹೇಳುತ್ತಿದ್ದಳು. ಹೀಗೆ ಸಂಯುಕ್ತೆ ವರಮಾಲೆಯೊಂದಿಗೆ ವಲಯದಲ್ಲಿ ಒಂದು ಸುತ್ತು ಬಂದಳು. ಯಾರಿಗೂ ಮಾಲೆ ಹಾಕಲಿಲ್ಲ.

ಸ್ವಯಂವರ ಮಂಟಪದಿಂದ ಸಂಯುಕ್ತೆ ಹೊರಗೆ ಹೋಗುವುದನ್ನು ನೋಡಿ ಎಲ್ಲರೂ ಆಶ್ಚರ್ಯಪಡತೊಡಗಿದರು. ಯಾರಿಗೂ ಕಾರಣ ಅರ್ಥವಾಗಲಿಲ್ಲ. ಅಷ್ಟರಲ್ಲಿ ಸಂಯುಕ್ತೆ ದ್ವಾರದಲ್ಲಿದ್ದ ಪೃಥ್ವೀರಾಜನ ಪ್ರತಿಮೆಯ ಕೊರಳಿಗೆ ವರಮಾಲೆ ಹಾಕಿ ನಮಸ್ಕರಿಸಿದಳು.





ಮರುಕ್ಷಣದಲ್ಲಿ ಯಾರೂ ಊಹಿಸದ ಸಂಘಟನೆ ನಡೆಯಿತು. ಅಲ್ಲಿದ್ದ ಪ್ರೇಕ್ಷಕರ ಹಿಂಗಡೆಯಿಂದ ಕುದುರೇ ಸವಾರನೊಬ್ಬ ಮಿಂಚಿನ ವೇಗದಲ್ಲಿ ಕುದುರೆಯಿಂದಿಳಿದು, ಸಂಯುಕ್ತೆಯ ಮುಂದೆ ಬಂದು ಅವಳೊಂದಿಗೆ ಏನೋ ಹೇಳಿದನು. ಸಂಯುಕ್ತೆ ಮುಗುಳು ನಕ್ಕು ತಲೆಯಾಡಿಸಿದಳು.

ಎಲ್ಲರೂ ಮೆಟ್ಟಿ ಬಿದ್ದೆದ್ದು ನೋಡುವುದ ರೊಳಗೆ, ಸಂಯುಕ್ತೆ ಕುದುರೆಯ ಮೇಲೇರಿ ಕುಳಿತಳು. ಆವಳ ಹಿಂದೆಯೇ ಒಂದೇ ಹಾರಿಕೆಗೆ ಸವಾರನೂ ಏರಿ ಕುಳಿತನು. ಅವನು ಮಾರುವೇಷದಲ್ಲಿದ್ದ ಪೃಥ್ವೀರಾಜನೇ ! ಜನರು ಎದ್ದೇಳುವುದರೊಳಗೆ ಪೃಥ್ವೀರಾಜನು ಸಂಯುಕ್ತೆಯೊಂದಿಗೆ ಆ ಪ್ರದೇಶ ದಿಂದ ಹೊರಟುಹೋದನು.





ಜಯಚಂದ್ರನು ಹಿಡಿಸಲಾಗದಷ್ಟು ಕೋಪದಿಂದ "ಅವರಿಬ್ಬರನ್ನೂ ಬಂಧಿಸಿರಿ !" ಎಂದು ಕೂಗಿದನು. ರಾಜಾಜ್ಞೆಯಿಂದ ಅನೇಕ ಮಂದಿ ಆಶ್ವಿಕರು ಓಡಿಹೋಗುವ ಪೃಥ್ವೀರಾಜನನ್ನು ಬೆಂಬತ್ತಿದರು. ಭಾರೀ ಕೋಲಾಹಲವೆದ್ದಿತು. ಸಂಯುಕ್ತೆ ಭಯದಿಂದ ಕಂಪಿಸಿದಳು.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ)

# ಪ್ರಾಣಭಯ

ಒಂದುಸಾರಿ ರಾಜನೊಬ್ಬನ ಮನೆಯಿಂದ, ಒಂದು ವಜ್ರ ಕಂಕಣವು ಕಳವಾಗಿ ಹೋಯಿತು. ರಾಜನು ಅಪೂರ್ವವಾಗಿ ಧರಿಸುವ ಆ ವಜ್ರ ಕಂಕಣವು ಶಯನ ಗೃಹದಲ್ಲಿ ಮಾಯವಾಗಿತ್ತು. ಅಂತಃಪುರಕ್ಕೆ ಮೂವರು ಕಾವಲುಗಾರರಿದ್ದರು.

ರಾಜನು ಅವರನ್ನು ವಿಧವಿಧವಾಗಿ ಪ್ರಶ್ನಿಸಿದರೂ ತಮಗೇನೂ ಗೊತ್ತಿಲ್ಲವೆಂದು ಆ ಕಾವಲುಗಾರರು ಹೇಳಿ ಬಿಟ್ಟರು.

ರಾಜನು ಕೋಪಾವೇಶದಿಂದ ಕಟುಕರನ್ನು ಕರೆಯಿಸಿ ಆ ಮೂವರ ತಲೆಗಳನ್ನೂ ಕಡಿಯಲು ಹೇಳಿದನು. ಆಗ ಮಂತ್ರಿ ಅಲ್ಲಿಗೆ ಬಂದು ಸಂಗತಿ ತಿಳಿದು, "ಮಹಾಪ್ರಭು, ಈ ಮೂವರಲ್ಲಿ ಒಬ್ಬನೇ ಕಳ್ಳ. ಅವನ ತಪ್ಪಿಗೆ ನಿರಪರಾಧಿಗಳಾದ ಮತ್ತಿಬ್ಬರನ್ನು ಕೊಲ್ಲುವುದು ಧರ್ಮವಾಗದು. ಕಳ್ಳ ಯಾರೆಂದು ನನಗೆ ಗೊತ್ತು. ಅಪ್ಪಣೆಯಾದರೆ ಹೇಳುತ್ತೇನೆ" ಎಂದನು.

"ಹಾಗಾದರೆ ಆ ಕಳ್ಳನ ತಲೆಯನ್ನು ನೀವೇ ಕಡಿಸಿರಿ" ಎಂದನು ರಾಜ.

ಮಂತ್ರಿ ಆ ಮೂವರನ್ನು ನೋಡಿ, "ಕಟುಕನ ಕೈಯಲ್ಲಿರುವ ಕತ್ತಿಯನ್ನು ನೋಡಿ ಹೆದರಬೇಡಿ. ಅವನು ನಿಮ್ಮಲ್ಲಿ ವಜ್ರ ಕಂಕಣ ಕದ್ದವನ ತಲೆಯನ್ನು ಮಾತ್ರವೇ ಕಡಿಯುತ್ತಾನೆ. ಮೂವರೂ ತಲೆ ತಗ್ಗಿಸಿ ಇಷ್ಟ ದೈವವನ್ನು ಸ್ಮರಿಸಿಕೊಳ್ಳಿ" ಎಂದನು.

ಮೂವರೂ ತಲೆಯನ್ನು ತಗ್ಗಿಸಿಕೊಂಡರು. ಅವರೊಳಗೆ ರಂಗಣ್ಣನೆಂಬವನು ಮಧ್ಯೆ ಮಧ್ಯೆ ಕಣ್ಣೆತ್ತಿ ಕಟುಕನ ಕಡೆಗೆ ನೋಡ ತೊಡಗಿದನು.

ಮಂತ್ರಿ ಅವನನ್ನು ರಾಜನಿಗೆ ತೋರಿಸಿ, "ಪ್ರಭೂ! ಆ ರಂಗಣ್ಣನೇ ನಿಜವಾದ ಕಳ್ಳ! ಉಳಿದಿಬ್ಬರು ನಿರಪರಾಧಿಗಳು" ಎಂದನು.

ರಾಜನು ಭಟರನ್ನು ಕಳುಹಿಸಿ ರಂಗಣ್ಣನ ಮನೆಯಲ್ಲಿ ಹುಡುಕಿಸಲು, ವಜ್ರಕಂಕಣ ದೊರಕಿತು. ರಾಜನು ಮಂತ್ರಿಯನ್ನು ಮೆಚ್ಚಿಕೊಂಡು ರಂಗಣ್ಣನನ್ನು ಕಾರಾಗೃಹಕ್ಕೆ ದೂಡಿಸಿದನು.





# ಗುಣಪಾಠ

ಹಿಂದಿನ ಕಾಲದಲ್ಲಿ ಒಂದು ದಿನ ಎಲ್ಲಪ್ಪನೆಂಬವನು ತನ್ನ ಊರಿನಿಂದ ವಿಜಯನಗರದ ಕಡೆಗೆ ಹೋಗುತ್ತಿದ್ದನು. ಆಗ ದಾರಿಯಲ್ಲಿ ಬಿಳಿಯಾದ ಉದ್ದುದ್ದ ಕೂದಲುಗಳಿಂದ ಹೊಳೆಯುವ ಒಂದು ನಾಯಿಯನ್ನು ಕರೆದುಕೊಂಡು, ನಲವತ್ತು ವಯಸ್ಸಿನವನೊಬ್ಬ ಇನ್ನೊಂದು ದಾರಿಯಿಂದ ಎತ್ತಲಿಂದಲೋ ಬರುತ್ತ, ಎಲ್ಲಪ್ಪನನ್ನು ಸಂಧಿಸಿದನು.

ಅವನು ಎಲ್ಲಪ್ಪನೊಂದಿಗೆ ಯಾರು ಏನೆಂದು ವಿಚಾರಿಸಲು, ತಾನು ಮಗಳ ಮದುವೆಗಾಗಿ ಕೆಲವು ನಗಗಳನ್ನು ಕೊಂಡುಕೊಳ್ಳಲು ನಗರಕ್ಕೆ ಹೋಗುವೆನೆಂದು ಎಲ್ಲಪ್ಪನು ಹೇಳಿ, "ಈ ನಾಯಿಯೊಂದಿಗೆ ನಿಮ್ಮ ಪ್ರಯಾಣ ಏನಿದು ?" ಎಂದು ಕೇಳಿದನು.

"ನನ್ನ ಹೆಸರು ಭದ್ರಯ್ಯ. ಇದು ನನ್ನ ಸಾಕು ನಾಯಿ. ನಗರದಲ್ಲೊಂದು ಮುಖ್ಯವಾದ ಕೆಲಸವಿದೆ. ಆದಕ್ಕಾಗಿ ಪ್ರೀತಿಯ ನಾಯಿಯನ್ನೇ ಜೊತೆಗಿಟ್ಟು ಕೊಂಡು ಹೋಗುತ್ತೇನೆ ಹೊರತು ವಿಶೇಷ ಕಾರಣವೇನಿಲ್ಲ" ಎಂದನು ನಾಯಿಯ ಒಡೆಯ.

ಹೀಗೆ ಇಬ್ಬರೂ ನಡೆಯುತ್ತಿರಲು, ನಾಯಿಯ ಚೆಂದವನ್ನು ನೋಡಿ ಮರುಳಾದ ಎಲ್ಲಪ್ಪನು, ಹಾಗೆ ಕೇಳುವುದು ಮರ್ಯಾದೆಯಲ್ಲವೋ ಏನೋ ಎಂಬುದನ್ನು ಕೂಡಾ ಆಲೋಚನೆ ಮಾಡದೆ, "ಈ ನಾಯಿಯನ್ನು ಮಾರುವಿರಾ ? ಏನು ಬೆಲೆ ಹೇಳುವಿರಿ ?" ಎಂದು ಕೇಳಿಬಿಟ್ಟನು.

ಆ ಪ್ರಶ್ನೆಗೆ ಭದ್ರಯ್ಯನು ಆಶ್ಚರ್ಯಪಟ್ಟು, ಎಲ್ಲಪ್ಪನನ್ನು ಪರೀಕ್ಷಿಸುವಂತೆ ಮೇಲಿಂದ ಕೆಳಗಿನವರೆಗೆ ನೋಡಿ "ಹುಂ, ಸರಿ. ಬೇಕಾದರೆ ಮಾರುತ್ತೇನೆ. ಬೆಲೆ ಸಾವಿರ ವರಹಗಳು, ಕೊಡುವವರು ಬೇಕಲ್ಲ !" ಎಂದನು.

"ಸಾವಿರ ವರಹಗಳೇ ! ಅಮ್ಮಮ್ಮ ! ಇಷ್ಟೊಂದು ದುರಾಶೆ ಒಳ್ಳೆಯದಲ್ಲ ! ಹೆಚ್ಚಾದರೆ ಈ ನಾಯಿಗೆ ಐದಾರು ವರಹಗಳನ್ನು ಕೊಡಬಹುದು. ಒಂದು ನಾಯಿಗೆ ಅದಕ್ಕಿಂತ ಹೆಚ್ಚು ಬೆಲೆ ಕೊಡುವವರು ಯಾರಿದ್ದಾರು ? " ಎಂದನು ಕೋಪದಿಂದ.

"ಆಸೆಯೋ, ದುರಾಸೆಯೋ, ಏನಾದರಾಗಲಿ. ನನ್ನ ನಾಯಿಯ ಬೆಲೆ ಸಾವಿರ ವರಹಗಳೇ. ಬೇಕಾದವರು ಕೊಡಲಿ, ಬೇಡದವರು ಬಿಡಲಿ !" ಎಂದು ಒತ್ತಿ ಹೇಳಿದ ಭದ್ರಯ್ಯ. "ನೀವು ಹೇಳುವ ಅಷ್ಟು ಬೆಲೆಗೆ, ಯಾವ ಖಾಲೀ ತಲೆಯವನು ಬಿಟ್ಟು,

ಎಂ. ವಿ. ಕೃಷ್ಣಮೂರ್ತಿ

ಅಸಲು ಹುಚ್ಚನು ಕೂಡ ಕೊಂಡುಕೊಳ್ಳಲಾರ" ಎಂದು ಎಲ್ಲಪ್ಪನು ಸ್ವಲ್ಪ ಹೊತ್ತು ನಕ್ಕನು.

"ಹಾಗಾದರೆ ಪಂಥ ಕಟ್ಟುವಿರಾ? ಇದನ್ನು ನಿಮ್ಮ ಎದುರಿನಲ್ಲಿಯೇ ಸಾವಿರ ವರಹಗಳಿಗೆ ಮಾರುತ್ತೇನೆ" ಎಂದನು ಭದ್ರಯ್ಯ.

"ಸರಿ ಪಂಥ ಕಟ್ಟುವೆನು. ನೀವು ಆ ಬೆಲೆಗೆ ಈ ನಾಯಿಯನ್ನು ಮಾರಿದರೆ ನೂರು ವರಹ ಕೊಡುತ್ತೇನೆ. ಮಾರಲಾಗದೆ ಹೋದರೆ ನೀವು ನನಗೆ ನೂರು ವರಹ ಕೊಡಬೇಕು. ಸರಿತಾನೇ?" ಎಂದನು ಎಲ್ಲಪ್ಪ. ಹೀಗೆ ಮಾತಾಡಿಕೊಂಡು ನಡೆದು ಇಬ್ಬರೂ ವಿಜಯನಗರದ ದೊಡ್ಡದೊಂದು ಪೇಟೆ ಬೀದಿಗೆ ತಲುಪಿದರು. ನಾಯಿಯನ್ನು ಮಾರಾಟಕ್ಕಿಟ್ಟ ಭದ್ರಯ್ಯನ ಹತ್ತಿರ ಮೂವರು ನಾಲ್ವರು ಬಂದು ಅದರ ಬೆಲೆ ಕೇಳಿದರು. ಸಾವಿರ ವರಹಗಳೆಂದು ಭದ್ರಯ್ಯನು ಹೇಳಿದಕೂಡಲೇ, ಇವನಾವನೋ ಹುಚ್ಚನೆಂದುಕೊಂಡು ಮರುಮಾತಾಡದೆ ಹೊರಟು ಹೋಗಿಬಿಟ್ಟರು.

"ನೋಡಿದಿರಾ! ನಾಯಿಯ ಮಾರಾಟ ದೇವರೇ ಗತಿ. ನಿಮ್ಮನ್ನು ಹುಚ್ಚರ ಸಾಲಿಗೆ ಸೇರಿಸುತ್ತಾರೆ ಜನರು! ಈಗಾದರೂ ಗೊತ್ತಾಯಿತೆ?" ಎಂದನು ಎಲ್ಲಪ್ಪ ಉತ್ಸಾಹದಿಂದ.

"ಅವಸರಪಡಬೇಡಿ. ನನ್ನ ನಾಯಿಯನ್ನು ಸಾವಿರ ವರಹಗಳಿಗೇ ಮಾರಿತೀರುತ್ತೇನೆ. ನೋಡುತ್ತಾ ಇರಿ!" ಎಂದನು ಭದ್ರಯ್ಯ.

ಬೀದಿಯ ಬದಿಯಲ್ಲಿ ಒಬ್ಬನು ಪಂಜರದಲ್ಲಿ ಕೆಲವು ಗಿಳಿಗಳನ್ನು ಮಾರಲಿಕ್ಕಾಗಿ ಇಟ್ಟಿದ್ದನು. ಭದ್ರಯ್ಯನು ಆ ಗಿಳಿಗಳವನ ಹತ್ತಿರ ಹೋಗಿ, ಆಶ್ಚರ್ಯಪಡುತ್ತ "ಎಲ! ನನ್ನ ನಾಯಿಯ ಹಾಗೇ ಈ ಗಿಳಿಗಳೂ ದೇವತಾಗಿಳಿಗಳ ಹಾಗೆಯೇ ಇವೆ! ಗಿಳಿಯಬೆಲೆ ಎಷ್ಟಪ್ಪಾ?" ಎಂದು ಕೇಳಿದನು.

"ಒಂದು ವರಹ ಸ್ವಾಮಿ" ಎಂದ ಗಿಳಿಗಳವನು.

"ಇಷ್ಟೊಂದು ಅಗ್ಗವೇ! ನೀನೊಬ್ಬ ಏನೂ ತಿಳಿಯದ ಕೇವಲ ಅಮಾಯಕನೇ ಸರಿ. ಒಂದೊಂದು ಗಿಳಿಯನ್ನು ಐನೂರು ವರಹಗಳಿಗೆ ಕೊಂಡುಕೊಳ್ಳು



ತ್ತೇನೆ. ಮಾರುವಿಯಾ ?" ಎನ್ನುತ್ತಾ, ಭದ್ರಯ್ಯನು ಪಂಜರದೊಳಗಿನ ಎರಡು ಗಿಳಿಗಳನ್ನು ಕೈಯಲ್ಲಿ ಎತ್ತಿಕೊಂಡನು.

" ಏನಯ್ಯಾ ಇದು ? ಗಿಳಿಯೊಂದಕ್ಕೆ ಐನೂರು ವರಹಾಗಳಿಗೆ ಕೊಂಡುಕೊಳ್ಳುವಿರಾ ? ನಿಮ್ಮ ಬುದ್ಧಿ ಸರಿಯಾಗಿ ಇರುವ ಹಾಗಿದೆಯಷ್ಟೆ ?" ಎಂದನು ಎಲ್ಲಪ್ಪ ಆಶ್ಚರ್ಯದಿಂದ.

ಭದ್ರಯ್ಯ ಅವನ ಮಾತನ್ನು ಒಂದಿಷ್ಟೂ ಲಕ್ಷಿಸದೆ ತನ್ನ ನಾಯಿಯನ್ನು ಗಿಳಿಗಳ ವ್ಯಾಪಾರಿಗೆ ತೋರಿಸಿ, "ನೋಡಪ್ಪ. ಈ ನಾಯಿಯ ಬೆಲೆ ಸಾವಿರ ವರಹಗಳು. ಹಣಕ್ಕೆ ಬದಲಾಗಿ ಇದನ್ನು ತೆಗೆದುಕೋ, ಈ ಎರಡು ಗಿಳಿಗಳನ್ನು ನಾನು ಕೊಂಡುಕೊಂಡೆನು. ಬೇರೆ ಮಾತಿಲ್ಲ " ಎಂದನು.

ಎರಡು ಗಿಳಿಗನ್ನು ಮಾರಿದರೆ ಬರುವ ಎರಡು ರೂಪಾಯಿಗಳಿಗಿಂತಲೂ ಈ ನಾಯಿಯನ್ನು ಮಾರಿದರೆ ಸ್ವಲ್ಪ ಹೆಚ್ಚೇ ಹಣ ಬರುತ್ತದೆಂದುಕೊಂಡು, ಗಿಳಿಗಳ ಮಾರಾಟಗಾರನು ಮತ್ತೇನೂ ಹೇಳದೆ, ಆ ನಾಯಿಯನ್ನು ತೆಗೆದುಕೊಂಡನು.

ಆಮೇಲೆ ಭದ್ರಯ್ಯನು ಎಲ್ಲಪ್ಪನ ಕಡೆಗೆ ತಿರುಗಿ, " ನೋಡಿದಿರಾ ? ನಿಮ್ಮ ಕಣ್ಣೆದಿರಲ್ಲೇ ನಾಯಿಯನ್ನು ಸಾವಿರ ವರಹಗಳಿಗೆ ಮಾರಿದ್ದೇನೆ. ಪಂಥದ ಪ್ರಕಾರ ನೂರು ವರಹ ನನಗೆ ಕೊಡಿರಿ " ಎಂದನು.

ಎಲ್ಲಪ್ಪ ಮನಸ್ಸಿನೊಳಗೇ ಅತಲ ಪಾತಾಳಕ್ಕೆ ಬಿದ್ದವನಂತೆ ನರಳುತ್ತ, ಹಣದ ಚೀಲವನ್ನೆತ್ತಿ ನೂರು ವರಹಗಳನ್ನು ಎಣಿಸಿ ಭದ್ರಯ್ಯನಿಗೆ ಕೊಟ್ಟು ಹೊರಡಲಣಿಯಾದನು. ಭದ್ರಯ್ಯನು ತಾನು ಕೊಂಡುಕೊಂಡ ಗಿಳಿಗಳನ್ನು ಸಮೀಪದಲ್ಲಿದ್ದ ಮರದ ಮೇಲಕ್ಕೆ ಹಾರಿ ಹೋಗಲು ಬಿಟ್ಟು, ಎಲ್ಲಪ್ಪನನ್ನು ನೋಡಿ, "ಗೊತ್ತಾಯಿತೇನ್ರೀ, ಮಾರುವೆನೆಂದು ಹೇಳದಿರುವುದರ ಮೇಲೆ ಮೋಜು ಬಿದ್ದು ಕಡೆಗೆ ಎಷ್ಟು ನಷ್ಟಪಡಬೇಕಾಯಿತು ! ಈ ಚಿಕ್ಕ ಮೊತ್ತ ನೂರು ವರಹಗಳಿಗೆ ನಿಮಗೆ ಸಿಕ್ಕಿದ್ದು ರತ್ನದಂಥ ಗುಣಪಾಠವೆಂದುಕೊಳ್ಳಿ. ಮರೆತು ಬಿಟ್ಟರೆ ಮುಂದೆ ಸಾವಿರ ವರಹಗಳ ನಷ್ಟ ನಿಮಗಾದೀತು !" ಎಂದನು.

ಎಲ್ಲಪ್ಪನು ಲಜ್ಜೆಯಿಂದ ಏನೂ ಹೇಳದೆ ತನ್ನ ಪಾಡಿಗೆ ಹೊರಟುಹೋದನು. ಅವನು ಕಣ್ಮರೆಯಾಗುವವರೆಗೂ ಭದ್ರಯ್ಯನು ಅಲ್ಲೇ ಇದ್ದು, ಆಮೇಲೆ ಗಿಳಿಗಳ ವ್ಯಾಪಾರಿಯ ಕೈಗೆ ಹತ್ತು ವರಹಗಳನ್ನು ಕೊಟ್ಟು, ಉಳಿದ ತೊಂಬತ್ತು ವರಹಗಳ ಲಾಭವನ್ನು ಮೂಟೆ ಕಟ್ಟಿ ಸೊಂಟಕ್ಕೇರಿಸಿಕೊಂಡು, ತನ್ನ ನಾಯಿಯನ್ನು ಹಿಂದೆ ಪಡೆದು ತನ್ನ ದಾರಿ ಹಿಡಿದು ಹೋದನು. ತಾನು ಮನೆಯಿಂದ ಹೊರಟಾಗ ಏನೋ ಒಳ್ಳೆಯ ಶಕುನವಾಗಿರಬೇಕೆಂದು ಅವನಿಗೆ ತೋರಿತು.





# ದೈವತ್ವ ಪಡೆದ ದೆವ್ವಗಳು

ಹಿಂದೆ ಮಾಲಾವರ ಎಂಬ ಊರಿನ ಕೊನೆಯಲ್ಲಿದ್ದ ಒಂದು ಆಲದ ಮರದಲ್ಲಿ ಅನೇಕ ದೆವ್ವಗಳು ವಾಸ ಮಾಡಿಕೊಂಡಿದ್ದುವು. ಒಂದು ದಿನ ಯಾವುದೋ ಒಂದು ಹೊಸ ದೆವ್ವವು ಆ ಮರದ ಹತ್ತಿರಬಂದಿತು.

"ಲೋ ! ಲೋ ! ಇಲ್ಲಿ ಬರಬೇಡವೋ. ಇಲ್ಲಿರುವ ನಮಗೇ ಈ ಮರ ಇಕ್ಕಟ್ಟಾಗಿದೆ. ಬೇರೆ ಯಾವುದಾದರೂ ಮರ ನೋಡಿಕೋ. ಹೋಗು ಹೋಗು !" ಎಂದು ಆಲದ ಮರದಲ್ಲಿದ್ದ ದೊಡ್ಡ ದೆವ್ವವು ಹೊಸ ದೆವ್ವವನ್ನು ಓಡಿಸಲು ನೋಡಿತು.

"ಎಲ್ಲಿಗೆ ಹೋಗಲಿ ? ಸಮೀಪದಲ್ಲಿ ಎಲ್ಲಿಯೂ ಇನ್ನೊಂದು ಆಲದ ಮರ ಕಾಣುವುದೇ ಇಲ್ಲ. ಹೇಗಾದರೂ ಒಂದು ಸಣ್ಣ ಕೊಂಬೆ ಕೊಟ್ಟರೂ ಸಾಕು !" ಎಂದು ಹೊಸ ದೆವ್ವವು ದೀನ ಮುಖ ಮಾಡಿಕೊಂಡು ಹೇಳಿತು.

"ಒತ್ತಾಯ ಏಕೆ ಮಾಡುತ್ತೀ ? ಎಲ್ಲಾದರೂ ಮನುಷ್ಯರ ನಡುವೆ ಹೋಗಿ ಇರಬಾರದೇ ?" ಎಂದಿತು ಒಂದು ದೆವ್ವ.

"ಅಯ್ಯೋ ! ಮನುಷ್ಯರೊಂದಿಗೆ ಸಹವಾಸ ಬಹಳ ಕಷ್ಟ. ಮನೆಯಲ್ಲಿ ದೆವ್ವವಿದೆಯೆಂದು ಅವರಿಗೆ ಅನುಮಾನವಾದರೆ ಸಾಕು. ಮಂತ್ರವಾದಿಗಳನ್ನು ಕರೆಸುತ್ತಾರೆ. ಆ ಮಂತ್ರವಾದಿಗಳ ಕಾಟ ತಾಳಲಾಗದೇನೇ ಹೀಗೆ ಓಡಿ ಬಂದಿದ್ದೇನೆ. ಆಲದ ಮರದ ಗಾಳಿಯ ಹೊರತು ಬೇರೆ ಗಾಳಿಯೇ ನನಗಾಗದು" ಎಂದಿತು ಹೊಸ ದೆವ್ವ.

ಮರದ ಮೇಲಿನ ದೆವ್ವಗಳಲ್ಲಿ ಸ್ವಲ್ಪ ಉಪಕಾರ ಬುದ್ಧಿಯ ದೆವ್ವ ಒಂದಿತ್ತು. ಅದು ಹೊಸ ದೆವ್ವದ ಮೇಲೆ ಕನಿಕರಗೊಂಡು "ಸರಿ ಹೋಗಲಿ. ಕೆಲವು ದಿನಗಳವರೆಗೆ ನೀನು ಈ ಮರದಲ್ಲಿರು. ನಾನು ಹೋಗಿ ಮನುಷ್ಯರ ನಡುವೆ ಇದ್ದು ನೋಡುತ್ತೇನೆ." ಎಂದು ಹೇಳಿ, ಅದು ಗಾಳಿಯಲ್ಲಿ ಹಾರಿ ಊರೊಳಗೆ ಹೋಗಿ ಒಂದಾನೊಂದು ಮನೆಯೊಳಗೆ ಮೆಲ್ಲನೆ ಪ್ರವೇಶ ಮಾಡಿತು.

ಆ ಮನೆಯ ಯಜಮಾನನ ಹೆಸರು ಶಂಕ್ರಯ್ಯ. ಹೆಂಡತಿಯೂ ಇಬ್ಬರು ಗಂಡು ಮಕ್ಕಳೂ ಅವನಿಗಿದ್ದರು. ಆ ಇಬ್ಬರು ಮಕ್ಕಳಿಗೂ ಮದುವೆಯಾಗಿ ಸೊಸೆಯಂದಿರೂ ಮನೆಗೆ ಬಂದಿದ್ದರು. ದೊಡ್ಡ ಮಗನಿಗೆ ಮೂರು ವಯಸ್ಸಿನ ಮಗು ಬಾಬು ಕೂಡಾ ಹುಟ್ಟಿದ್ದಾನೆ.

"ವಸುಂಧರ"



ಪುಣ್ಯದಿಂದ ನೀವು ನಮಗೆ ಅತ್ತೆಯಾಗಿ ಸಿಕ್ಕಿದ್ದೀರಿ." ಎಂದಳು ಸಣ್ಣ ಸೊಸೆ ಅತ್ತೆಯನ್ನು ಹೊಗಳುತ್ತ,

"ಆ ನೆರೆಮನೆಯವಳನ್ನು ದೆವ್ವಕ್ಕೆ ಹೋಲಿಸುವುದೇ ಸರಿಯಲ್ಲ. ದೆವ್ವಗಳು ಆಕೆಗಿಂತ ಎಷ್ಟೋ ಮೇಲು!" ಎಂದಳು ದೊಡ್ಡ ಸೊಸೆ.

ಅದನ್ನು ಕೇಳಿ ಅತ್ತೆ ನಗಾಡುತ್ತ, "ದೆವ್ವಗಳು ಮೇಲೂ ಅನ್ನುವಿಯಾ ? ಅಂದರೆ ನಿನಗೆ ದೆವ್ವಗಳ ವಿಷಯ ಚೆನ್ನಾಗಿ ಗೊತ್ತಿದೆ ಎಂದಾಯಿತು. ಹೌದೇನು ? " ಎಂದಳು.

"ಗೊತ್ತಿಲ್ಲದೇ ಏನು ? ನಮ್ಮಜ್ಜ ಹೇಳುತ್ತಿದ್ದರು; ನಾವು ದೆವ್ವಗಳನ್ನು ಮೆಚ್ಚಿಕೊಂಡರೆ ಅವು ನಮ್ಮ ಚಾಕರಿಕೂಡಾ ಮಾಡುತ್ತವಂತ. ನೆರೆಮನೆಯಾಕೆ ಎಷ್ಟು ಚಾಕರಿ ಮಾಡಿದರೂ ಸೊಸೆಯನ್ನು ನಿಂದಿಸಿ ಕೊಂಡೇ, ತೇಯಿಸಿಕೊಂಡೇ ಇರುತ್ತಾಳೆ" ಎಂದಳು ದೊಡ್ಡ ಸೊಸೆ,

"ಸರಿ ಸರಿ ! ನೀನು ಮೆಚ್ಚಿಕೊಳ್ಳುವದಾದರೆ. ಈ ದಿನ ನೀನು ಮಾಡಬೇಕಾದ ಎರಡು ಹಂಡೆ ಗಳಿಗೆ ನೀರು ತುಂಬಿಸುವ ಕೆಲಸ ಆ ದೆವ್ವವೇ ಮಾಡುತ್ತದೆ ಅಂದುಕೊಳ್ಳುವಿಯಾ ?" ಎಂದಳು ಚಿಕ್ಕ ಸೊಸೆ.

"ಏನೋ ಹೇಗೆ ಹೇಳಲಿ ? ದೆವ್ವಗಳು ಒಳ್ಳೇದೇ ಮಾಡುತ್ತವೆ ಅಂತ ನಮ್ಮಜ್ಜ ಹೇಳ್ತಾ ಇದ್ರು. ನನ್ನ ಮಾತು ಅವು ಕೇಳಿದರೆ, ನಾವು ನಿದ್ದೆ ಮಾಡಿ ಎದ್ದಾಗ ನೀರು ತುಂಬಿಸಿ ತಯಾರಾದರೂ ಆದೀತು. ಅವು ನಮ್ಮ ಕಣ್ಣಿಗೆ ಕಾಣುವಂಥವಲ್ಲವಷ್ಟೆ?" ಎಂದಳು ದೊಡ್ಡ ಸೊಸೆ.

ರಾತ್ರಿಯಲ್ಲಿ ಎಲ್ಲರೂ ನಿದ್ದೆ ಮಾಡಿದರು. ಅವರ ಸಂಭಾಷಣೆಯನ್ನು ಕೇಳಿದ ದೆವ್ವಕ್ಕೆ ತನ್ನನ್ನು ಮೆಚ್ಚಿ ಕೊಂಡ ದೊಡ್ಡ ಸೊಸೆಯ ಮೇಲೆ ಅಭಿಮಾನ ಬಂತು. ಅವಳಿಗೆ ದೆವ್ವಗಳ ಸಹಾನುಭೂತಿಗೆ ತಕ್ಕ ಪ್ರತಿಕ್ರಿಯೆ ಮಾಡಬೇಕೆಂದು ತೋರಿತು. ಮರುದಿನ

ಆ ಮನೆಯಲ್ಲಿ ದೆವ್ವಕ್ಕೆ ಏನೂ ಕಷ್ಟ ಕಾಣಲಿಲ್ಲ. ಅದು ಯಾರಿಗೂ ಕಾಣಿಸದೆ, ಎಲ್ಲೆಂದರಲ್ಲಿ ತಿರುಗ ಬಹುದಾಗಿತ್ತು. ಆಲದ ಮರಕ್ಕಿಂತ ಆ ಮನೆಯೇ ಚೆನ್ನಾಗಿರುವಂತೆ ಅದಕ್ಕೆ ತೋರಿತು. ಆ ಮನೆಯವರು ಏನೇನೋ ಸ್ವಾರಸ್ಯವಾಗಿ ಮಾತಾಡಿಕೊಳ್ಳುತ್ತಿದ್ದಾಗ, ದೆವ್ವ ಅದನ್ನು ಕೇಳುತ್ತ ಆನಂದಪಡುತ್ತಿದ್ದಿತು. ಶಂಕ್ರಯ್ಯನ ಮೊಮ್ಮಗನ ಮುದ್ದು ಚೇಷ್ಟೆಗಳು ಅದಕ್ಕೆ ಒಳ್ಳೆಯ ವಿನೋದ ಕೊಡುತ್ತಿದ್ದುವು. ಆ ಮನೆಯನ್ನು ಬಿಟ್ಟು ಹೋಗಬಾರದೆಂತಲೇ ದೆವ್ವ ನಿಶ್ಚಯಿಸಿಕೊಂಡಿತು.

ಹೀಗೆ ಒಂದು ತಿಂಗಳ ಕಾಲ ಹಾಯಾಗಿ ಕಳೆಯಿತು ಆ ದೆವ್ವಕ್ಕೆ. ಒಂದು ದಿನ ಆ ಮನೆಯ ಮೂವರು ಹೆಂಗುಸರು ಹರಟೆ ಮಾತಾಡುತ್ತಾ ಕುಳಿತಿದ್ದರು.

ಚಿಕ್ಕ ಸೊಸೆ ಅತ್ತೆಯನ್ನು ಮೆಚ್ಚಿಕೊಳ್ಳುತ್ತ, "ನಮ್ಮ ನೆರೆಮನೆಯಲ್ಲಿದ್ದಾರಲ್ಲ ಒಬ್ಬರು ಅತ್ತೆ ? ಆಕೆ ಸೊಸೇನ ದೆವ್ವದ ಹಾಗೆ ಕಾಡ್ತಾಳೆ ! ನಮ್ಮ

ಬೆಳಿಗ್ಗೆ ದೊಡ್ಡ ಸೊಸೆ ನಿದ್ದೆಯಿಂದೇಳುವಾಗ ಎರಡು ಹಂಡೆಗಳ ತುಂಬ ಆಗಲೇ ಸೇದಲ್ಪಟ್ಟ ಬಾವಿಯ ನೀರು ತುಂಬಿಕೊಂಡಿದ್ದವು.

ದೊಡ್ಡ ಸೊಸೆ ಬಾವಿಯ ಬದಿಗೆ ಹೋಗಿ ಎರಡು ಹಂಡೆಗಳ ತುಂಬಾ ನೀರಿರುವುದನ್ನು ನೋಡಿ ಆಶ್ಚರ್ಯದಿಂದ ಹಾರಿ ಬಿದ್ದು ಅತ್ತೆಯನ್ನೂ, ಚಿಕ್ಕ ಸೊಸೆಯನ್ನೂ ಕರೆದು, ನೀವು ಯಾರಾದರೂ ನೀರು ಸೇದಿ ತುಂಬಿಸಿದಿರಾ ?" ಎಂದು ಕೇಳಿದಳು.

ಇಬ್ಬರೂ ಇಲ್ಲವೆಂದರು. ಚಿಕ್ಕವಳು ಒಂದು ನಿಮಿಷ ತಡೆದು, "ನಮ್ಮ ಮಾತು ಕೇಳಿ ರಾತ್ರಿಯಲ್ಲಿ ಮಾವಯ್ಯನೇ ನಮ್ಮನ್ನು ಆಶ್ಚರ್ಯಪಡಿಸಲಿಕ್ಕೆ ಈ ಕೆಲಸ ಮಾಡಿದರೋ ಏನೋ ?" ಎಂದಳು.

ಆದರೆ ಶಂಕ್ರಯ್ಯನೂ, ಅವನ ಇಬ್ಬರು ಮಗಂದಿರೂ ಬೆಳಗವರೆಗೆ ಬಾವಿಯವರೆಗೆ ಬರಲೇ ಇಲ್ಲವೆಂದು ಹೇಳಿ ಬಿಟ್ಟರು.

"ನಿಜಕ್ಕೂ ದೆವ್ವ ಗಿವ್ವ ಏನಾದರೂ ಈ ಕೆಲಸ ಮಾಡಿರಲಾರದಷ್ಟೆ ?" ಎಂದಳು ಚಿಕ್ಕ ಸೊಸೆ.

"ಹುಚ್ಚು ಮಾತು ! ದೆವ್ವ ಪಿಶಾಚಿಗಳಿಗೆಲ್ಲ ಇಂಥಾ ಉಪಕಾರಬುದ್ಧಿ ಎಲ್ಲಿಂದ ? ತಮಾಷೆಗಾಗಿ ನಮ್ಮಲ್ಲೇ ಯಾರೋ ಈ ಕೆಲಸ ಮಾಡಿರಬೇಕು" ಎಂದು ಶಂಕ್ರಯ್ಯ ಎಲ್ಲರ ಮುಖಗಳನ್ನೂ ಪರೀಕ್ಷಿಸಿ ನೋಡಿದನು.

ಆಗ ಶಂಕ್ರಯ್ಯನ ದೊಡ್ಡ ಮಗನು ಸಾವಧಾನದ ಗಂಭೀರ ಭಾವದಲ್ಲಿ, "ಇದು ನಿಜವಾಗಿಯೂ ಉಪಕಾರಬುದ್ಧಿಯ ದೆವ್ವದ ಕೆಲಸವೇ ಆಗಿದ್ದರೆ ಈ ಸಣ್ಣ ಸಹಾಯದಿಂದ ಏನು ದೊಡ್ಡ ಕಾರ್ಯ ಆದ ಹಾಗಾಯಿತು ? ಮಾಡಿನ ಹೆಂಚು ತಿರುಗ ಹಾಕಿ ನಾಲ್ಕು ವರ್ಷಗಳಾದುವು. ಮಳೆ ಬಂದರೆ ಅಲ್ಲಲ್ಲಿ ಸೋರುತ್ತದೆ. ಅದನ್ನು ಸರಿಮಾಡಬಹುದಲ್ಲ ?" ಎಂದನು. ಈ ಮಾತುಗಳನ್ನು ಕೇಳುತ್ತಾ ಇದ್ದ ದೆವ್ವಕ್ಕೆ ತಾನು ಮಾಡಿದ ಕೆಲಸಕ್ಕೆ ಯಾವ ಮುಖ್ಯತ್ವವೂ ಬರಲಿಲ್ಲವೆಂದು ನೊಂದುಕೊಂಡಿತು. ಅಂತಲೇ ಆ ದಿನ ರಾತ್ರಿ ಮಾಡಿ ಹೆಂಚುಗಳನ್ನೆಲ್ಲಾ ಸರಿಗೊಳಿಸಿ, ಹೊರಳಿಸಿ, ಒಡಕು ಹೆಂಚುಗಳನ್ನು





ಹೊರಟುಹೋದನು. ಇದನ್ನೆಲ್ಲಾ ದೆವ್ವವು ಆಶ್ಚರ್ಯ ಪಡುತ್ತ ನೋಡುತ್ತಿದ್ದಿತು. ಶಂಕ್ರಯ್ಯನಿಗೆ ಬೇಗನೇ ಗುಣವಾದ ಹೊರತು ತಾನು ಮಾಡಿದ ಒಳ್ಳೆಯ ಕೆಲಸ ಮನೆಯವರಿಗೆ ತಿಳಿಯುವಂತಿಲ್ಲವೆಂದು ತಿಳಿದು ದೆವ್ವಕ್ಕೆ ನಿರುತ್ಸಾಹವಾಯಿತು.

ನಾಲ್ಕು ದಿನಗಳು ಕಳೆಯುತ್ತಿರಲು, ನೋವು ತೋರಿದಾಗಲೆಲ್ಲಾ ಶಂಕ್ರಯ್ಯ ಮಯಕದ ಮದ್ದನ್ನು ತೆಗೆದುಕೊಂಡು ಸ್ವಸ್ಥ ಮಲಗಿಕೊಂಡಿರುವನು. ಈ ಗೊಡವೆಯಿಂದಾಗಿ ಮನೆಯವರಾರೂ ಮಾಡಿನಲ್ಲಿಯ ಹೆಂಚಿನ ಹೊಸ ಮಾರ್ಪಾಡಿನ ಸಮಾಚಾರವನ್ನು ಗಮನಿಸಲೇ ಇಲ್ಲ.

ಒಂದು ದಿನ ದೊಡ್ಡ ಮಳೆ ಪ್ರಾರಂಭವಾಯಿತು. ಶಂಕ್ರಯ್ಯ ಮಂಚದಲ್ಲಿ ಎದ್ದು ಕುಳಿತು, ಮನೆಯವರೊಂದಿಗೆ, "ಧಾನ್ಯದ ಕೋಣೆ ಜಾಗ್ರತೆ! ಅಲ್ಲಿ ಒದ್ದೆಯಾಗಿ ಹೋದರೆ ಹೊಟ್ಟೆಗೆ ಕಷ್ಟಪಡಬೇಕಾದೀತು!" ಎಂದು ಕೂಗಿ ಹೇಳಿದನು.

ಮನೆಯೊಳಗೆ ಎಲ್ಲರೂ ತಲಾ ಒಂದೊಂದು ಕಡೆಗೆ ಹೋಗಿ ನೋಡಿದರು. ಮೊದಲಿನ ಹಾಗೆ ಎಲ್ಲಿಯೂ ಒಂದು ಬೊಟ್ಟು ಕೂಡಾ ಸೋರುತಿದ್ದಿಲ್ಲ. ಎಲ್ಲರೂ ಆಶ್ಚರ್ಯ ಪಟ್ಟು ಆ ಸಂಗತಿಯನ್ನು ಶಂಕ್ರಯ್ಯನ ಹತ್ತಿರ ಬಂದು ಹೇಳಿದರು.

"ಆ! ಸೋರೋದೇ ಇಲ್ವೇ? ಒಂದು ವೇಳೆ ಇದು ದೆವ್ವದ ಕೆಲಸವಾಗಿರಲಿಕ್ಕಿಲ್ಲವಷ್ಟೆ?" ಎಂದನು ಆಚೀಚೆ ನೋಡುತ್ತಾ ಶಂಕ್ರಯ್ಯ.

ಶಂಕ್ರಯ್ಯನ ದೊಡ್ಡ ಮಗನು ಒಂದು ದಿನ ದೆವ್ವವನ್ನು ಕುರಿತು ಹೇಳಿದ ಮಾತುಗಳು ಆಗ ಎಲ್ಲರಿಗೂ ನೆನಪಿಗೆ ಬಂದುವು. ಮಳೆ ತಗ್ಗಿದ ಮೇಲೆ ಮಾಡಿನ ಮೇಲೆ ನೋಡಿದರೆ ಹೆಂಚುಗಳನ್ನು ಬಹು ಚೆನ್ನಾಗಿ ಹೊದಿಸಿಡಲಾಗಿದೆ. ಒಡಕು ಹೆಂಚುಗಳು ಮೂಲೆಯಲ್ಲಿ ಒಟ್ಟಲ್ಪಟ್ಟಿವೆ. ಹೊಸ ಹೆಂಚುಗಳು ಕೆಲವು ಮಾಡಿನ ಮೇಲೇರಿವೆ!

ತೆಗೆದು, ತಂದಿಟ್ಟಿದ್ದ ಹೊಸ ಹೆಂಚುಗಳನ್ನು ಹೊಂದಿಸಿ ಚೆನ್ನಾಗಿ ಸರಿಗೊಳಿಸಿಟ್ಟಿತು.

ಬೆಳಗಾದ ಮೇಲೆ ಮನೆಯವರೆಲ್ಲಾ ತನ್ನನ್ನು ಮೆಚ್ಚಿಕೊಳ್ಳುವರೆಂದು ದೆವ್ವವು ಬಹಳ ಆಶೆಯಿಂದ ಇದಿರುನೋಡಿತು. ಆದರೆ ಶಂಕ್ರಯ್ಯ ಬೆಳಿಗ್ಗೆ ಎದ್ದು ಮೇಲೆ ನೋಡಿ, "ಹೋ" ಎಂದು ಕೆಟ್ಟದಾಗಿ ಕೂಗಿ ನೆಲದಲ್ಲಿ ಬಿದ್ದನು. ಅವನ ಇಬ್ಬರು ಮಗಂದಿರೂ ತುಂಬ ಗಾಬರಿಯಾಗಿ ಓಡಿ ಹೋಗಿ ವೈದ್ಯನನ್ನು ಕರೆದು ತಂದರು.

ವೈದ್ಯನು ಶಂಕ್ರಯ್ಯನನ್ನು ಪರೀಕ್ಷಿಸಿ "ಇವರಿಗೆ ಹೊಟ್ಟೆಯಲ್ಲಿ ಹುಣ್ಣಾಗಿದೆ. ಶಸ್ತ್ರಚಿಕಿತ್ಸೆ ಮಾಡಬೇಕು. ಸ್ವಲ್ಪ ನೋವಾದೀತು, ಅದು ತಿಳಿಯದ ಹಾಗೆ ಇವರಿಗೆ ಬೋದ ತಪ್ಪುವ ಮದ್ದು ಕೊಡುತ್ತೇನೆ" ಎಂದನು.

ಅನಂತರ ಶಸ್ತ್ರಚಿಕಿತ್ಸೆ ನಡೆದು, ನೋವು ತಿಳಿಯದಂತೆ ವೈದ್ಯನು ಮಯಕದ ಮದ್ದು ಕೊಟ್ಟು



ಸೊಸೆಯಂದಿರಿಬ್ಬರೂ ಹೆದರಿ ಕೈಕಾಲು ಗೆಟ್ಟರು. "ಈ ಮನೆಯಲ್ಲಿ ನಿಜಕ್ಕೂ ದೆವ್ವ ಸೇರಿದೆ!" ಎಂದು ಅತ್ತೆ ಗೋಳಿಟ್ಟಳು.

"ಮಂತ್ರದ ಓಂಕಾಳಪ್ಪನನ್ನು ಈಗಲೇ ಕರೆದು ಕೊಂಡು ಬರುತ್ತೇನೆ." ಎಂದು ದೊಡ್ಡ ಮಗನು ಊರೊಳಗೆ ಓಡಿದನು.

ಇದೇನಿದು? ತಾನು ಮನೆಯವರಿಗೆಲ್ಲ ಉಪಕಾರ ಮಾಡಿದರೆ ಅವರು ಹೀಗೇಕೆ ಭಯಪಟ್ಟು ಸಾಯುವರೋ ಎಂದು ತಿಳಿಯದೆ, ದೆವ್ವವು ಅಲ್ಲಿಂದ ಹೊರಟು ಆಲದ ಮರದ ಕಡೆಗೆ ಹೋಯಿತು.

ಅದನ್ನು ನೋಡಿದ ಕೂಡಲೇ, "ಛೀ ಛೀ! ಇಲ್ಲಿ ಜಾಗವಿಲ್ಲವೆಂದು ಗೊತ್ತಿಲ್ಲವೇ ನಿನಗೆ?" ಎಂದು ಮರದ ದೆವ್ವಗಳಲ್ಲಿ ಒಂದು ದೆವ್ವ ಅದನ್ನು ನೋಡಿ ಛೀತ್ಕರಿಸಿತು.

ಮನೆ ದೆವ್ವವು ಆ ದೆವ್ವದ ಗುರುತು ಹಿಡಿದು, "ನೀನೇನಾ? ಮಂತ್ರಗಾರರಿಗೆ ಹೆದರಿ ಓಡಿಬಂದೆ ನೆಂದೆಯಲ್ಲಾ? ಮಂತ್ರಗಾರರು ಬಂದರೆ ಏನು ಮಾಡುತ್ತಾರೆ? ಅದನ್ನು ತಿಳಿಯುವಾ ಅಂತಲೇ ಬಂದೆ" ಎಂದಿತು.

"ಅಯ್ಯೋ! ಮಂತ್ರಗಾರರು ಬಡಬಡನೆ ಮಂತ್ರ ಹೇಳಿದರೆ ನಮಗೆ ಮೈಯೆಲ್ಲಾ ಉರಿ ಶುರು ವಾಗುತ್ತದೆ. ಅದನ್ನು ತಡೆಯಲಿಕ್ಕಾಗದೆ ನಾವು ಓಡಲೇ ಬೇಕಾಗುತ್ತದೆ." ಎಂದಿತು ಆ ದೆವ್ವ.

"ಓಸ್ ಅಷ್ಟೇನಾ?" ಎಂದುಕೊಳ್ಳುತ್ತಾ ಮನೆ ದೆವ್ವವು ಮತ್ತೆ ಶಂಕ್ರಯ್ಯನ ಮನೆಗೇ ಹಿಂದಿರುಗಿ ಬಂದು, ವೈದ್ಯನು ಶಂಕ್ರಯ್ಯನಿಗೆ ಕೊಟ್ಟ ಮಯಕದ ಮದ್ದನ್ನಿಷ್ಟು ನುಂಗಿ, ಒಂದು ಮೂಲೆಯಲ್ಲಿ ತೂಕಡಿಸುತ್ತಾ ಕುಳಿತಿತು.

ಮಂತ್ರಗಾರ ಓಂಕಾಳಪ್ಪನು ತನ್ನ ಮಂತ್ರದ ಪೂಜಾ ಸಾಧನಗಳನ್ನು ಹರಡಿಸಿಕೊಂಡು ಜೋರು ಜೋರಾಗಿ ಮಂತ್ರಗಳನ್ನು ಪಠಿಸ ತೊಡಗಿದನು. ಎಷ್ಟು ತೀವ್ರ ಮಂತ್ರಗಳನ್ನು ಉಚ್ಚರಿಸಿದರೂ ದೆವ್ವದ ಜಾಡು ತಿಳಿಯಲೇ ಇಲ್ಲ.

"ಎಲ! ಏನಿದು? ನಾನು ದೊಡ್ಡ ಸಿಡಿಲಿನಂಥ ಮಂತ್ರ ಪ್ರಯೋಗಿಸುತ್ತೇನೆ! ಅವುಗಳಿಂದ ಎಂಥ ಪ್ರಚಂಡ ದೆವ್ವವೂ ಓಡಬೇಕು! ಹುಂ! ನನ್ನನ್ನು ನೋಡಿಯೇ ಅದು ಓಟಕಿತ್ತಿದೆ" ಎಂದು ಹೇಳಿ ಓಂಕಾಳಪ್ಪನು, ತನ್ನ ಮಂತ್ರದ ಮೂಟೆಯನ್ನು ಕಟ್ಟಿ ಕೊಂಡು, ತನ್ನ ಬಳುವಳಿ ದಕ್ಷಿಣೆಗಳನ್ನೂ ಪಡೆದು ಹೊರಟು ಹೋದನು.

"ನಿಜಕ್ಕೂ ದೆವ್ವವು ಮನೆ ಬಿಟ್ಟು ಹೋಯಿ ತಷ್ಟೆ?" ಎಂದು ಚಿಕ್ಕ ಸೊಸೆ ಸಂದೇಹದಿಂದ ದೊಡ್ಡವಳನ್ನು ಕೇಳಿದಳು.

"ಹೋಗದೆ ಇನ್ನೂ ಇಲ್ಲೇ ಇದ್ದರೆ, ಅದು ಇವತ್ತು ರಾತ್ರಿ ಕೋಣೆಯಲ್ಲಿರುವ ಬತ್ತವನ್ನೆಲ್ಲಾ ಕುಟ್ಟಿ ಅಕ್ಕಿಮಾಡಿಟ್ಟೀತು! ನೋಡೋಣ." ಎಂದಳು ದೊಡ್ಡ ಸೊಸೆ.

ಆ ಸಮಯಕ್ಕೆ ದೆವ್ವಕ್ಕೆ ಮಯಕದ ಮದ್ದಿನ ಪ್ರಭಾವವು ಇಳಿದು ಎಚ್ಚರ ಬಂದಿತ್ತು. ದೊಡ್ಡವಳು ಹೇಳಿದ ಮಾತುಗಳು ಅದರ ಕಿವಿಗೆ ಬಿತ್ತು. ಮತ್ತೇನು ? ರಾತ್ರಿಯಲ್ಲಿ ಕೋಣೆಯ ಬತ್ತವಷ್ಟನ್ನೂ ಕುಟ್ಟಿ ಅಕ್ಕಿ ಮಾಡಿಟ್ಟಿತು.

ಮಾರನೇ ದಿನ ಧಾನ್ಯದ ಕೋಣೆಯಲ್ಲಿರುವ ಅಕ್ಕಿಯ ರಾಶಿಯನ್ನು ನೋಡಿ ಮನೆಯಲ್ಲಿದ್ದವರೆಲ್ಲ ಭಯಾಶ್ಚರ್ಯಗಳಿಂದ ನಿರ್ವಿಣ್ಣರಾದರು. ಸ್ವಲ್ಪ ಹೊತ್ತಿನ ಮೇಲೆ ದೊಡ್ಡ ಸೊಸೆ ಧೈರ್ಯ ತಂದು ಕೊಂಡು, "ಇಷ್ಟೊಂದು ಒಳ್ಳೇ ಕೆಲಸಗಳನ್ನು ಮಾಡುವುದು ದೆವ್ವವಾಗಿರಲಾರದು. ದೆವ್ವವಾಗಿದ್ದರೆ ಓಂಕಾಳಪ್ಪನ ಮಂತ್ರಗಳಿಂದ ಓಡಿ ಹೋಗಬೇಕಿತ್ತು. ಈ ಮನೆಯನ್ನು ಯಾವುದೋ ಒಳ್ಳೆಯ ದೈವವೇ ಕಾಪಾಡುತ್ತಿರಬೇಕು. ದೆವ್ವಗಳೂ ಒಳ್ಳೆಯ ಕೆಲಸ ಮಾಡುತ್ತವೆಂದು ಅಜ್ಜ ಹೇಳುವುದು ಸುಳ್ಳಾದರೆ, ದೈವಗಳು ಒಳಿತನ್ನೇ ಮಾಡುತ್ತವೆಂದು ಎಲ್ಲರೂ ಹೇಳುತ್ತಾರಪ್ಪೆ ? ಅದರಲ್ಲೇನೂ ಸಂದೇಹವಿಲ್ಲ ವಷ್ಟೆ ? " ಎಂದಳು. ಅವಳ ಮಾತು ಕೇಳಿ ಎಲ್ಲರಿಗೂ ಧೈರ್ಯ ಬಂದಿತು. ಮನೆಯಲ್ಲಿದ್ದ ದೆವ್ವವು ಉತ್ಸಾಹ ದಿಂದ ಆಲದಮರದ ಕಡೆಗೆ ಹೋಯಿತು. ಅಲ್ಲಿಯ ಒಂದು ದೆವ್ವವು, "ಮಂತ್ರಗಾರ ಮನೆಯಿಂದ ಓಡಿಸಿದನೇ ?" ಎಂದು ಕೇಳಿತು.

"ಆದೇನಿಲ್ಲ. ನಿಮಗೆಲ್ಲರಿಗೂ ಒಳ್ಳೇ ಸಮಾಚಾರ ಹೇಳ ಬೇಕೆಂತಲೇ ಬಂದೆ. ಮನುಷ್ಯರ ಮನೆಗಳಲ್ಲಿ ಹಾಯಾಗಿರಲು ಉಪಾಯ ಗೊತ್ತಾಯಿತು " ಎಂದು ಶಂಕ್ರಯ್ಯನ ಮನೆಯಲ್ಲಿದ್ದ ದೆವ್ವವು ಮಯಕದ ಮದ್ದಿನ ಅದ್ಭುತವಾದ ಸಂಗತಿಯನ್ನು ಅಲ್ಲಿರುವ ದೆವ್ವಗಳಿಗೆ ಹೇಳಿತು.

"ಭಲೇ ಒಳ್ಳೇ ಉಪಾಯ ! ಇನ್ನು ಮೇಲೆ ನಾವು ಮರಗಳನ್ನೇ ಹಿಡಿದು ನೇತಾಡಿಕೊಂಡಿರ ಬೇಕಾಗಿಲ್ಲ." ಎಂದು ದೆವ್ವಗಳೆಲ್ಲಾ ಆನಂದದಿಂದ ಕೂಗಾಡಿ ಕೊಂಡುವು.

ಶಂಕ್ರಯ್ಯನ ಮನೇ ದೆವ್ವವು ಅವುಗಳಿಗೆಲ್ಲಾ ಸುಮ್ಮನಿರುವಂತೆ ಹೇಳಿ, "ಇಷ್ಟರವರೆಗೆ ನಾವು ಕೆಟ್ಟವರೆಂದೇ ಅಂದುಕೊಂಡಿದ್ದೆ. ನಾವು ದೆವ್ವಗಳಾ ದರೂ ಒಳ್ಳೆಯ ಕೆಲಸಗಳನ್ನು ಮಾಡಿದರೆ ಮನುಷ್ಯರು ನಮ್ಮನ್ನು ದೈವಗಳೆಂದು ಹೇಳಿ ಪೂಜಿಸುತ್ತಾರೆ. ನಾವು ಮನುಷ್ಯರೊಂದಿಗೆ ಸಂತೋಷವಾಗಿ ಬದುಕ ಬೇಕಾದರೆ, ನಾವು ಒಳ್ಳೆಯ ಕೆಲಸ ಮಾಡುತ್ತ ದೇವತೆಗಳೆನಿಸಿಕೊಳ್ಳಬೇಕು " ಎಂದಿತು.

ಆ ದಿನದಿಂದ ಒಳ್ಳೆಯ ಕೆಲಸ ಮಾಡುವ ದೆವ್ವಗಳೆಲ್ಲ ದೇವತೆಗಳೆನಿಸಿ ದೈವಗಳಾದುವು. ಕೆಟ್ಟ ಕೆಲಸಗಳನ್ನು ಬಿಡಲಾಗದಂಥವು ಮಾತ್ರ ದೆವ್ವ ಗಳಾಗಿಯೇ ಉಳಿದುವು.





# ವ್ಯತ್ಯಾಸ

ಒಂದು ಕಾಲದಲ್ಲಿ ಕಾಂಚನ ನಗರವನ್ನು ಚಂದ್ರಾ ಪೀಡನೆಂಬ ರಾಜನು ಪಾಲಿಸಿಕೊಂಡಿದ್ದನು. ಆತನ ಸಮೀಪವರ್ತಿಯಾಗಿ ಧವಳಮುಖನೆಂಬ ಒಬ್ಬ ಸೇವಕನಿದ್ದನು. ಧವಳಮುಖನು ಪ್ರತಿ ದಿನವೂ ತನ್ನ ಕೆಲಸ ಮುಗಿದ ಕೂಡಲೇ ಎಲ್ಲಿಯೋ ಊಟಮಾಡಿ ತಾಂಬೂಲ ಹಾಕಿಕೊಂಡು ತುಂಬಾ ಹೊತ್ತು ಕಳೆದು ಮನೆಗೆ ತಲಪುತ್ತಿದ್ದನು.

ಇಷ್ಟು ತಡವಾಗಿ ಮನೆಗೆ ಬರುವುದಕ್ಕೆ ಕಾರಣ ವೇನೆಂದು ಅವನ ಹೆಂಡತಿ ಕೇಳುತ್ತಿರಲಿಲ್ಲ. ಅವನೂ ಹೇಳಲಿಲ್ಲ. ಕಡೆಗೆ ಒಂದು ದಿನ ಅವನ ಹೆಂಡತಿ "ನಾನೊಂದು ಕೇಳುತ್ತೇನೆ, ನೀವು ಪ್ರತಿ ದಿನಾ ಎಲ್ಲಿಯೋ ಊಟ ಮಾಡಿ ಬರುತ್ತೀರಷ್ಟೆ? ಹಾಗೆ ನಿಮಗೆ ಊಟ ಹಾಕುವವರು ಯಾರು? ಏತಕ್ಕಾಗಿ?" ಎಂದು ಕೇಳಿದಳು.

ಧವಳಮುಖನು ಹೆಂಡತಿಯೊಂದಿಗೆ, "ನನಗೆ ಇಬ್ಬರು ಒಳ್ಳೆಯ ಸ್ನೇಹಿತರಿದ್ದಾರೆ. ಒಬ್ಬನ ಹೆಸರು ಕಲ್ಯಾಣವರ್ಮನೆಂದು. ಅವನು ನನಗೆ ತನ್ನ ಹತ್ತಿರ ಏನಿದ್ದರೂ ಕೊಡುವಂಥವನು. ಇನ್ನು ಎರಡನೇ ಯವನು ವೀರಬಾಹು. ಅವನು ನನಗೆ ಎಂತಹ ಪ್ರಾಣಸ್ನೇಹಿತನೆಂದರೆ ಅಗತ್ಯ ಬಿದ್ದರೆ ನನ್ನ ಪ್ರಾಣಕ್ಕೆ ತನ್ನ ಪ್ರಾಣವನ್ನು ಕೂಡಾ ಕೊಡುವವನು. ಆ ಇಬ್ಬರಲ್ಲಿ ಒಬ್ಬರ ಮನೆಯಲ್ಲಿ ಮಾತುಕತೆಯಾಡುತ್ತ ಊಟ ಮಾಡುತ್ತೇನೆ" ಎಂದನು.

ತನ್ನ ಗಂಡನಿಗೆ ಅಷ್ಟು ದೊಡ್ಡ ಸ್ನೇಹಿತರಿದ್ದಾರೆಂದು ಕೇಳಿ ಧವಳಮುಖನ ಹೆಂಡತಿಗೆ ಬಹಳ ಸಂತೋಷವಾಯಿತು. "ನನಗೂ ನಿಮ್ಮ ಆ ಸ್ನೇಹಿತರನ್ನು ಒಂದು ಸಾರಿ ತೋರಿಸುವಿರಾ?" ಎಂದಳು.

"ಅದಕ್ಕೇನು ಕಷ್ಟ? ನಾಳೆ ನನ್ನ ಜತೆಯಲ್ಲಿ ಬಾ." ಎಂದನು ಧವಳಮುಖ.

ಅದರಂತೆ ಮರುದಿನ ಬೆಳಿಗ್ಗೆ ಗಂಡ ಹೆಂಡಿರಿಬ್ಬರೂ ಕಲ್ಯಾಣವರ್ಮನ ಮನೆಗೆ ಹೋದರು. ಕಲ್ಯಾಣ ವರ್ಮನು ಅವರಿಬ್ಬರಿಗೂ ತುಂಬಾ ಸತ್ಕಾರ ಮಾಡಿದನು, ಕಲ್ಯಾಣವರ್ಮನಿಗಾದ ಸಂತೋಷವು ಚೆನ್ನಾಗಿ ಪ್ರತಿಫಲಿಸಿತು.

ಆಮೇಲೆ ಆ ದಂಪತಿಗಳು ವೀರಬಾಹುವಿನ ಮನೆಗೆ ಹೋದರು, ಅವರು ಹೋದಾಗ ವೀರಬಾಹು ಯಾರೊಂದಿಗೋ ಚದುರಂಗ ಆಡಿಕೊಂಡಿದ್ದನು. ಅವನು ಧವಳಮುಖನನ್ನು ಒಂದು ಸಾರಿ ನೋಡಿ,

"ಏನೋ ? ಬಂದೆಯಲ್ಲಾ, ಕುಳಿತುಕೋ" ಎಂದು ಹೇಳಿ ಆಟದಲ್ಲೇ ಮಗ್ನನಾದನು.

ಗಂಡ ಹೆಂಡಿರು ಸ್ವಲ್ಪ ಹೊತ್ತು ಅಲ್ಲಿ ಸುಮ್ಮನೆ ಕುಳಿತು, ಆಮೇಲೆ ಎದ್ದು "ಹೋಗಿ ಬರುತ್ತೇವೆ" ಎಂದರು. ವೀರಬಾಹು ತಲೆ ಎತ್ತದೆಯೇ "ಒಳ್ಳೇದು!" ಎಂದಷ್ಟೇ ಹೇಳಿದನು.

ಧವಳಮುಖಿನ ಹೆಂಡತಿ ಮನೆಗೆ ಹಿಂದಿರುಗುವಾಗ ಗಂಡನೊಂದಿಗೆ, "ಕಲ್ಯಾಣವರ್ಮನಿಗಿಂತಲೂ ಈ ವೀರಬಾಹು ನಿಮಗೆ ಪ್ರಾಣಬೇಕಾದರೂ ಕೊಡುವಂಥ ಸ್ನೇಹಿತನೆಂದಿರಲ್ಲಾ ? ಇವನಿಗಿಂತ ಅವನೇ ನಮ್ಮನ್ನು ಹೆಚ್ಚಿಗೆ ಆದರಿಸಿದ್ದಾನಲ್ಲವೆ? " ಎಂದಳು.

"ಅವರಿಬ್ಬರ ನಡುವಿನಲ್ಲಿದ್ದ ವ್ಯತ್ಯಾಸ ಗೊತ್ತಾಗ ಬೇಕಾದರೆ ನಾಳೆ ನೀನೊಂದು ಕೆಲಸ ಮಾಡು. ನೀನೊಬ್ಬಳೇ ಅವರಿಬ್ಬರ ಮನೆಗೂ ಹೋಗಿ, ನನ್ನ ಮೇಲೆ ರಾಜನಿಗೆ ಕೋಪಬಂತೆಂದು ಹೇಳು" ಎಂದು ಧವಳಮುಖಿನು ಹೆಂಡತಿಯೊಂದಿಗೆ ಹೇಳಿದನು.

ಅದರಂತೆ ಅವಳು ಮರುದಿನ ಮೊದಲು ಕಲ್ಯಾಣವರ್ಮನ ಮನೆಗೆ ಹೋಗಿ ಅವನೊಂದಿಗೆ ದುಃಖದಿಂದ, "ಅಯ್ಯೋ, ನನ್ನ ಗಂಡನ ಮೇಲೆ ಮಹಾರಾಜರು ಬಹಳ ಕೋಪಗೊಂಡಿದ್ದಾರೆ. ನೀವು ನಿಮ್ಮ ಸ್ನೇಹಿತನಿಗೆ ಏನಾದರೂ ಸಹಾಯ ಮಾಡಲಾದೀತೇ ?" ಎಂದು ಕೇಳಿದಳು,

ಕಲ್ಯಾಣವರ್ಮನು ತುಂಬಾ ಹೆದರಿ, ತಳಮಳ ಗೊಳ್ಳುತ್ತ, "ಅಮ್ಮಾ, ನಾನು ವರ್ತಕ ಕೆಲಸ ಮಾಡುವವನು, ಮಹಾರಾಜನನ್ನು ಇದಿರಿಸಿ ಏನು ತಾನೇ ಮಾಡಲಾದೀತು ? ಸದ್ಯ ನಿನ್ನ ಗಂಡನು ದೇಶ ಬಿಟ್ಟು ಓಡಿಹೋಗುವುದೇ ಒಳ್ಳೇದು" ಎಂದನು.

ಧವಳ ಮುಖಿನ ಹೆಂಡತಿ ಅಲ್ಲಿಂದ ಹಿಂದಿರುಗಿ ವೀರಬಾಹುವಿನ ಮನೆಗೆ ಹೋಗಿ ಅವನೊಂದಿಗೆ ಕೂಡಾ ಅದೇ ಮಾತು ಹೇಳಿದಳು, ಆ ಮಾತು ಕೇಳಿದ ಕೂಡಲೇ ವೀರಬಾಹು, ಕತ್ತಿಯನ್ನೂ ಢಾಲನ್ನೂ ತೆಗೆದುಕೊಂಡು ಅವಳೊಂದಿಗೇ ಹೊರಟು ಧವಳ ಮುಖಿನ ಮನೆಗೆ ಬಂದು, ಧವಳ ಮುಖಿನೊಂದಿಗೆ, "ಮಿತ್ರಾ, ನಿನ್ನ ಮೇಲೆ ರಾಜನಿಗೆ ಕೋಪ ಬರುವ ಹಾಗೆ ಮಾಡಿದವರು ಯಾರು ? ಆ ತುಚ್ಛ ಪಾಪಾತ್ಮನನ್ನು ಕೂಡಲೇ ಹೋಗಿ ಹತ ಮಾಡಿ ಬಿಡುತ್ತೇನೆ" ಎಂದನು ಆವೇಶದಿಂದ.

ಧವಳ ಮುಖಿನು "ಕುಳಿತುಕೊಳ್ಳಯ್ಯಾ. ಆವೇಶ ವೇನೂ ಬೇಡ. ಮಂತ್ರಿಗಳು ಒಳ್ಳೆಯ ಮಾತು ಹೇಳಿ ರಾಜನನ್ನು ನನ್ನ ಮೇಲೆ ಸುಮುಖಿಗೊಳಿಸಿಬಿಟ್ಟರು. ಇನ್ನೇನಿಲ್ಲವಪ್ಪ" ಎಂದನು.

ವೀರಬಾಹು ಹೊರಟು ಹೋದ ಮೇಲೆ ಧವಳ ಮುಖಿನು ಹೆಂಡತಿಯೊಂದಿಗೆ, "ನೋಡಿದೆಯಷ್ಟೆ ನನ್ನ ಮಿತ್ರರೊಳಗಿನ ವ್ಯತ್ಯಾಸವನ್ನು !" ಎಂದನು.






ನಾರದನು ಹೇಳಿದ ಹಾಗೆಯೇ ಪಾಂಡವರು ವಿಘ್ನೇಶ್ವರನನ್ನು ಆರಾಧಿಸಲು ತೊಡಗಿ, ಧೌಮ್ಯನ ಪೌರೋಹಿತ್ಯದಲ್ಲಿ ಗಣೇಶ ವ್ರತವನ್ನು ಕೈಕೊಂಡು, ಮುಗಿಸಿದರು. ಆಮೇಲೆ ತಮ್ಮ ವೇಷಗಳನ್ನು ಬದಲಾಯಿಸಿಕೊಂಡು. ಬೇರೆಬೇರೆಯಾಗಿ ಹೋಗಿ ವಿರಾಟ ರಾಜನ ಆಶ್ರಯದಲ್ಲಿ ಸೇರಿಕೊಂಡು, ತಮ್ಮ ಅಜ್ಞಾತವಾಸವನ್ನು ಜಯಪ್ರದವಾಗಿ ಮುಗಿಸಿದರು.

ಆಮೇಲೆ ಕೃಷ್ಣನ ಸಹಾಯದಲ್ಲಿ ಪಾಂಡವರು ಕೌರವರೊಂದಿಗೆ ಕೊನೆಯ ಮಹಾಯುದ್ಧವನ್ನು ಮಾಡಿ ವಿಜಯಿಗಳಾದರು. ಅದರ ಫಲವಾಗಿ ಹಸ್ತಿನಾಪುರದಲ್ಲಿ ಧರ್ಮರಾಜನು ಪಟ್ಟಾಭಿಷಿಕ್ತನಾಗಿ ರಾಜ್ಯಪಾಲನೆಯನ್ನು ಕೈಕೊಂಡನು. ಅಷ್ಟಾದ ಮೇಲೆ ಧರ್ಮರಾಜನು ಅಶ್ವಮೇಧಯಾಗ ಮಾಡಲು ಆಲೋಚನೆ ಮಾಡಿದನು.

ಯಾಗಾಶ್ವವನ್ನು ದೇಶಗಳ ಮೇಲೆ ಕಳುಹಿಸುವಾಗ, ಅರ್ಜುನನು ಸೈನ್ಯಸಮೇತನಾಗಿ ಯಾಗಾಶ್ವದ ಹಿಂದೆ ಹೊರಟನು. ಪಾಂಡವರ ಪುರೋಹಿತನಾದ ಧೌಮ್ಯನೂ ಅರ್ಜುನನೊಂದಿಗಿದ್ದನು.

ಯಾಗಾಶ್ವವು ಅನೇಕ ರಾಜ್ಯಗಳ ಮೇಲಿಂದಾಗಿ ಸಾಗುತ್ತಿದ್ದಿತು. ಅನೇಕ ರಾಜರು ಧರ್ಮರಾಜನ ಪಾಲನೆಯನ್ನು ಒಪ್ಪಿಕೊಂಡು ವಿನಯವಿಧೇಯತೆಗಳಿಂದ ವರ್ತಿಸಿದರು; ಕಾಣಿಕೆಗಳನ್ನು ಸಮರ್ಪಿಸಿದರು. ಹೀಗೆ ಹೋಗುತ್ತಾ ಇದ್ದ ಯಾಗಾಶ್ವವು ಒಂದು ಪ್ರಾಂತದಲ್ಲಿ, ಮುಂದೆ ಹಜ್ಜೆಯಿಡದೆ ಸುಮ್ಮನೆ ನಿಂತುಬಿಟ್ಟಿತು. ಏನು ಮಾಡಿದರೂ ಮುಂದೆ ಕಾಲ್ತೆಗೆಯಲು ಯಾಗಾಶ್ವವು ಒಪ್ಪಲಿಲ್ಲ.

ಅರ್ಜುನನು ಆಶ್ಚರ್ಯಪಟ್ಟು ಕುದುರೆ ಹಾಗೆ ನಿಲ್ಲಲು ಕಾರಣವೇನೆಂದು ಧೌಮ್ಯನನ್ನು ಕೇಳಿದನು. ಧೌಮ್ಯನು, ಹೇಳುತ್ತೇನೆ, ಬಾರೆಂದು ಅರ್ಜುನನನ್ನು ಸೈನ್ಯದೊಂದಿಗೆ ಸ್ವಲ್ಪ ದೂರ ಕರೆದುಕೊಂಡು ಹೋದನು. ಅಲ್ಲಿ ದೊಡ್ಡದೊಂದು ಮಹಾನಗರವು ಕಂಡಿತು. ಆ ಮಹಾನಗರದಲ್ಲಿ ಬ್ರಹ್ಮಾಂಡದಂತಹ ವಿಘ್ನೇಶ್ವರನ ವಿಗ್ರಹವೊಂದು ಕಾಣುತ್ತಿತ್ತು.

೧೫. ವಾತಾಪಿಗಣಪತಿ



ದಲ್ಲಿ ಮಹಾವೈಭವದಿಂದ ಬೆಳಗಿಕೊಂಡಿದ್ದ ಛಾಯೆಗಳು ಕಾಣುತ್ತಿದ್ದುವು. ಈಗ ಆ ನಗರವು ಪಾಲಕರಿಲ್ಲದೆ ಪಾಳುಬಿಡದು ಬಿದ್ದಿತ್ತು. ಅಲ್ಲಿ ಲೆಕ್ಕವಿಲ್ಲದಷ್ಟು ಜನರೇನೋ ಇದ್ದರು.

ಅರ್ಜುನನನ್ನು ನೋಡಿ ಅವರು ಸಂತೋಷದಿಂದ ಸ್ವಾಗತ ವಚನಗಳನ್ನು ಹೇಳಿ, "ನೀವಾದರೂ ಈ ನಗರವನ್ನು ಪುನರುದ್ಧಾರ ಮಾಡಬೇಕು" ಎಂದು ಪ್ರಾರ್ಥಿಸಿಕೊಂಡರು.

"ಅರ್ಜುನಾ, ವಾತಾಪಿನಗರವೆಂದರೆ ಇದೇ. ನಗರದ ಮಧ್ಯದಲ್ಲಿರುವ ವಿಘ್ನೇಶ್ವರನು ಅಗಸ್ತ್ಯ ಮಹಾಮುನಿಯಿಂದ ಸ್ಥಾಪಿಸಲ್ಪಟ್ಟ ವಿಗ್ರಹ ರೂಪದಲ್ಲಿದ್ದಾನೆ. ಇದನ್ನು ವಾತಾಪಿಗಣಪತಿ ಕ್ಷೇತ್ರವೆಂತಲೂ ಹೇಳುತ್ತಾರೆ! ಇಲ್ಲಿಯ ವಿಶೇಷಗಳನ್ನು ಹೇಳುತ್ತೇನೆ ಕೇಳು" ಎಂದು ಧೌಮ್ಯನು ಹಿಂದಿನ ಸಮಾಚಾರವನ್ನೆಲ್ಲಾ ಹೇಳಿದನು:

ಗಂಗೆಯ ಬಿಂದುಗಳು ಕವೇರನೆಂಬ ರಾಜರ್ಷಿಯ ಕಮಂಡಲುವಿನೊಳಗೆ ಬಿದ್ದಾಗ ಅದು ಕಾವೇರಿಯ ರೂಪಧರಿಸಿ, ಅವಳು ಅವನ ಕುಮಾರಿಯಾಗಿ ಆಶ್ರಮದಲ್ಲೇ ದೊಡ್ಡವಳಾದಳು. ಅಗಸ್ತ್ಯನು ಆ ಕನ್ಯೆಯನ್ನು ನೋಡಿ, ಅವಳನ್ನು ತಾನು ವಿವಾಹ ಮಾಡಿಕೊಳ್ಳುತ್ತೇನೆಂದು ಕವೇರನೊಂದಿಗೆ ಹೇಳಿದನು.

ಅವನ ಇಷ್ಟಕ್ಕೆ ಕವೇರನು ಸಮ್ಮತಿಯನ್ನು ತಿಳಿಯಪಡಿಸಿ, "ನನ್ನ ಸಮ್ಮತಿಗಿಂತಲೂ ಮುಖ್ಯವಾಗಿ ಕಾವೇರಿಯ ಇಷ್ಟವನ್ನು ತಿಳಿಯುವುದು ಒಳ್ಳೆಯದಲ್ಲವೇ ?" ಎಂದನು.

ಅವಳ ಇಷ್ಟ ತಿಳಿಯಲಿಕ್ಕಾಗಿ ಅಗಸ್ತ್ಯನು ಕವೇರನ ಆಶ್ರಮದಲ್ಲಿಯೇ ಇರುತ್ತ ಕಾವೇರಿಯೊಂದಿಗೆ ಸಲಿಗೆಯಿಂದ ಪಳಗ ತೊಡಗಿದನು. ಒಂದು ದಿನ ಕಾವೇರಿ ಅವನೊಂದಿಗೆ, "ನಾವು ಸಹ್ಯಾದ್ರಿಗೆ ಹೋಗಿ ವನವಿಹಾರ ಮಾಡೋಣ"

ದೊಡ್ಡದೊಂದು ಬಂಡೆ ಕಲ್ಲಿನಲ್ಲಿಯೇ ಕೊರೆದು ಮಾಡಲ್ಪಟ್ಟ ಶಿಲ್ಪವಾಗಿತ್ತು ಅದು, ಅತ್ಯಂತ ಅದ್ಭುತವಾದ ಕಲಾಕೌಶಲಗಳಿಂದ ಅದು ಶೋಭಿಸಿಕೊಂಡಿದ್ದಿತು,

ಧೌಮ್ಯನು ಅದನ್ನು ಅರ್ಜುನನಿಗೆ ತೋರಿಸಿ, "ಅರ್ಜುನಾ, ಮೊದಲು ಈ ವಿಘ್ನೇಶ್ವರಮೂರ್ತಿಯನ್ನು ಅರ್ಚಿಸಿ ಪ್ರಣಾಮಮಾಡು. ವಾತಾಪಿ ಗಣಪತಿ ಎಂದು ಹೆಸರುಪಡೆದ ಈ ವಿಘ್ನೇಶ್ವರನನ್ನು ಕುರಿತು, ಇದಕ್ಕೆ ಸಂಬಂಧಿಸಿದ ವಾತಾಪೀನಗರದ ವಿಶೇಷ ಸಮಾಚಾರವನ್ನು ಕುರಿತು ಸವಿಸ್ತಾರವಾಗಿ ಹೇಳುತ್ತೇನೆ." ಎಂದನು.

ಅರ್ಜುನನು ಆ ವಾತಾಪಿಗಣಪತಿಯನ್ನು ಭಕ್ತಿಯಿಂದ ಪೂಜಿಸಿ ಅನುಗ್ರಹಬೇಡಿಕೊಂಡು ಪ್ರಣಾಮ ಮಾಡಿದನು. ಧೌಮ್ಯನು ಅವನನ್ನು ಕರೆದುಕೊಂಡು ವಾತಾಪಿನಗರದ ಕಡೆಗೆ ಹೋದನು. ಕಳೆಗೆಟ್ಟು ಹೋಗಿದ್ದ ಆ ನಗರವು ಯಾವುದೋ ಒಂದು ಕಾಲ

ಎಂದಳು. ಅಂತೆಯೇ ಅಗಸ್ತ್ಯನು ಕಾವೇರಿಯನ್ನು ಸಹ್ಯಾದ್ರಿಗೆ ಕರೆದೊಯ್ದನು.

ಇಬ್ಬರೂ ಅಲ್ಲಿಯ ವನದಲ್ಲಿ ವಿಹರಿಸಿಕೊಂಡಿರಲು, ಒಂದು ಮಡುವಿನ ನೀರಿನಲ್ಲಿ ಅರಳಿದ ದೊಡ್ಡ ತಾವರೆ ಹೂವನ್ನು ನೋಡಿ, ಕಾವೇರಿ ಮುಗ್ಧಳಾಗಿ. ಅದನ್ನು ತೆಗೆಯಲು ಮಡುವಿನಲ್ಲಿ ಕಾಲಿಟ್ಟಳು. ನೀರನ್ನು ಮುಟ್ಟಿದ ಕೂಡಲೇ ಅವಳು ಒಮ್ಮೆಗೇ ಕರಗಿ ಜಲರಾಶಿಯಾಗಿ ಮಡುವಿನಲ್ಲಿ ತುಂಬಿ ಉಕ್ಕಿ ಸಹ್ಯಪರ್ವತಶಿಖರಗಳಿಂದ ಜಳಜಳನೆ ಜಾರಿಕೊಂಡು, ದೊಡ್ಡ ಗಂಭೀರ ನದಿಯಾಗಿ ತೆರೆಗಳೊಂದಿಗೆ ನಲಿಯುತ್ತ ಓಡ ತೊಡಗಿದಳು. ಅದು ಕಾವೇರಿ ನದಿಯೆಂದು ಬಹು ಪ್ರಸಿದ್ಧವಾಯಿತು. ಅದರೊಂದಿಗೆ ಅಗಸ್ತ್ಯನ ಕೋರಿಕೆಯೂ ಹೊರಟು ಹೋಯಿತು.

ಅಗಸ್ತ್ಯನು ಕಾವೇರಿಯನ್ನು ಮರೆಯಲಾಗದೆ. ಅವಳನ್ನೇ ಧ್ಯಾನಿಸಿಕೊಂಡು ಬಹಳಕಾಲ ಬ್ರಹ್ಮಚಾರಿಯಾಗಿದ್ದನು. ಆ ಸ್ಥಿತಿಯಲ್ಲೇ ದೊಡ್ಡ ತಪಸ್ಸನ್ನೂ ಮಾಡಿ ಋಷಿಶ್ರೇಷ್ಠನೆನಿಸಿಕೊಂಡನು.

ಒಂದು ದಿನ ಅವನು ಅರಣ್ಯದಲ್ಲಿ, ಮರದ ಕೊಂಬೆಗಳಲ್ಲಿ ತಲೆಕೆಳಗಾಗಿ ನೇತಾಡುತ್ತಿರುವ ಪಿತೃದೇವತೆಗಳನ್ನು ನೋಡಿ "ಯಾರು ನೀವು? ಹೀಗೇಕಿರುವಿರಿ?" ಎಂದು ಕೇಳಿದನು.

ಅವರು ನಿಟ್ಟುಸಿರುಬಿಟ್ಟು, "ನಮ್ಮ ಕಷ್ಟ ಏನೆಂದು ಹೇಳಲಿ? ನಮ್ಮ ವಂಶದವನಾದ ಅಗಸ್ತ್ಯನು ಗೃಹಸ್ಥನಾಗಿ ಸಂತಾನವಂತನಾಗುವವರೆಗೂ ನಾವು ಹೀಗೇ ಇರಬೇಕಾಗಿದೆ!" ಎಂದು ಉತ್ತರ ಕೊಟ್ಟರು.

ಅದನ್ನು ಕೇಳಿ ಅಗಸ್ತ್ಯನು ವಿವಾಹಮಾಡಿಕೊಳ್ಳುವ ಉದ್ದೇಶದಲ್ಲಿ ಜ್ಞಾನದೃಷ್ಟಿಯಿಂದ ತಕ್ಕ ಕನ್ಯೆಯನ್ನು ನೋಡಿದನು. ವಿದರ್ಭದ ರಾಜನಿಗೆ ಕಾವೇರಿಯ ಅಂಶದಿಂದ ಕುಮಾರಿಯೊಬ್ಬಳು ಹುಟ್ಟಿ



ಲೋಪಾಮುದ್ರೆ ಎಂಬ ಹೆಸರಿನಲ್ಲಿ ಯುಕ್ತವಯಸ್ಸಿಗೆ ಬಂದಿರುವಳೆಂದು ಗೊತ್ತಾಯಿತು. ಅಗಸ್ತ್ಯನು ಅಲ್ಲಿಗೆ ಹೋಗಿ, ಕುಮಾರಿ ಲೋಪಾಮುದ್ರೆಯನ್ನು ತನಗೆ ವಿವಾಹಮಾಡಿಕೊಡಬೇಕೆಂದು ವಿದರ್ಭ ರಾಜನನ್ನು ಕೇಳಿದನು.

ಕಂದಮೂಲಗಳನ್ನು ತಿನ್ನುತ್ತ, ನಾರು ಬಟ್ಟೆ ಕಟ್ಟಿಕೊಂಡು ತಿರುಗುವ ಮುನಿಗೆ ಸುಕುಮಾರಿಯಾದ ರಾಜಕುಮಾರಿಯನ್ನು ಕೊಡುವುದಾದರೂ ಹೇಗೆ? ಕೊಡುವುದಿಲ್ಲವೆಂದರೆ ಮುನಿ ಶಪಿಸುವನೇನೋ ಎಂದು ರಾಜನಿಗೆ ಸಂಶಯ ಬಂದು ವ್ಯಾಕುಲಪಡ ತೊಡಗಿದನು. ಆಗ ಲೋಪಾಮುದ್ರೆ ತಂದೆಯ ಬಳಿಗೆ ಬಂದು, ಸ್ವಲ್ಪವೂ ಚಿಂತೆ ಮಾಡದೆ ತನ್ನನ್ನು ಅಗಸ್ತ್ಯ ಮಹಾಮುನಿಗೆ ಕೊಟ್ಟು ವಿವಾಹ ಮಾಡುವಂತೆ ಸಂತೋಷದಿಂದ ಹೇಳಿದಳು. ಅವಳು ಮನಃಪೂರ್ವಕವಾಗಿಯೇ ಹೇಳುವಳೆಂಬುದನ್ನು ದೃಢಪಡಿಸಿಕೊಂಡು ವಿದರ್ಭರಾಜನು ಆ ವಿಧವಾಗಿ



ಲೋಪಾಮುದ್ರೆಯನ್ನು ಅಗಸ್ತ್ಯ ಮಹರ್ಷಿಗೆ ಕೊಟ್ಟು ಮದುವೆ ಮಾಡಿ ಕಳುಹಿಸಿಕೊಟ್ಟನು.

ಅಗಸ್ತ್ಯಮುನಿ ಲೋಪಾಮುದ್ರೆಯೊಂದಿಗೆ ತನ್ನ ಆಶ್ರಮಕ್ಕೆ ಬಂದ ಮೇಲೆ ಒಂದು ದಿನ "ನಾನು ನಿನ್ನನ್ನು ಏಕೆ ವಿವಾಹಮಾಡಿಕೊಂಡೆನೆಂದರೆ, ನನ್ನ ಪಿತೃದೇವತೆಗಳನ್ನು ಪುನ್ನಾಮನರಕದಿಂದ ತಪ್ಪಿಸಲಿಕ್ಕಾಗಿಯೇ. ಇನ್ನು ಬೇಗದಲ್ಲೇ ನಿನ್ನಿಂದ ಸಂತಾನ ಪಡೆಯಬೇಕಾಗಿದೆ" ಎಂದನು.

ಆಗ ಅವಳು ತನ್ನ ಮಾಸಿದ ಸೀರೆಯನ್ನು ನೋಡಿಕೊಂಡು ಚಿಂತಿಸುತ್ತ, "ಆದಕ್ಕಾಗಿ ಆನಂದಿಸಬೇಕಾದರೆ ಬರಿಯ ಮದುವೆ ಮಾಡಿಕೊಂಡ ಮಾತ್ರಕ್ಕೆ ಆಯಿತೇ? ನಾನು ರಾಜನ ಮಗಳಾಗಿ ಹುಟ್ಟಿ ಬೆಳೆದವಳು. ನನಗೆ ಸರಿಹೋಗುವಂತಹ ಒಳ್ಳೊಳ್ಳೆಯ ಬಟ್ಟೆ ಬರೆಗಳೂ, ರತ್ನಾಭರಣಗಳೂ ಬೇಕು, ಅವುಗಳನ್ನು ಕೊಡುವುದು ನಿಮ್ಮ ವಿಧಿ. ಆದಕ್ಕಾಗಿ ಮೊದಲು ಬೇಕಾದುದು ಧನ. ಅದನ್ನು ಸಂಪಾದಿಸಬೇಕಾದುದು ನಿಮ್ಮ ಕರ್ತವ್ಯವಲ್ಲವೆ? ಮೊದಲು ಧನ ಸಂಪಾದನೆಗೆ ದಾರಿ ನೋಡಿರಿ. ಅದು ಮದುವೆಯಾಗುವಷ್ಟು ಸುಲಭವಲ್ಲವಷ್ಟೆ?" ಎಂದಳು.

ಅಗಸ್ತ್ಯನು ಹೆಂಡತಿಯ ಮಾತಿನ ನಿಜವನ್ನು ಅರಿತು ಧನ ಸಂಪಾದನೆ ಮಾಡಲು ಹೊರಟನು. ಅವನು ಅನೇಕ ರಾಜರ ಬಳಿಗೆ ಹೋಗಿ. ರಾಜ್ಯ ಪಾಲನೆಗೆ ಸರಿಯಾಗಿದ್ದು, ಹೆಚ್ಚಾಗಿರುವ ಧನವನ್ನು ತನಗೆ ಕೊಡುವಂತೆ ಕೇಳಿದನು. ಯಾವ ರಾಜನೂ ಉಳಿಯುವ ಧನದ ಲೆಕ್ಕ ಹೇಳದೆ ಹೋದನು. ಬದಲಾಗಿ ಪ್ರಜಾಪಾಲನೆಗೆ ಧನವು ಕಡಿಮೆಯಾಗುವುದೆಂದೇ ಹೇಳಿದರು. ಆದರ ಮೇಲೆ ತಮಗೆ ಕೂಡಾ ಧನಲಾಭವಾಗುವ ಮಾರ್ಗವಿದ್ದರೆ ಹೇಳಬೇಕೆಂದು ಅಗಸ್ತ್ಯನನ್ನೇ ತಿರುಗಿ ಕೇಳಿದರು.

ಇದರಿಂದ ಅಗಸ್ತ್ಯನು ಹತಾಶನಾಗಿ ಅರಣ್ಯ ಮಾರ್ಗದಲ್ಲಿ ಎಲ್ಲಿಗೋ ಹೋಗುತ್ತಾ ಇದ್ದನು. ಒಂದು ಕಡೆಯಲ್ಲಿ ಉನ್ನತವಾದೊಂದು ಮಹಾ ಶಿಲೆಯನ್ನು ನೋಡಿದನು. ಆ ಬಂಡೆಗಲ್ಲು ಲಂಬೋದರನಾದ ವಿಘ್ನೇಶ್ವರನನ್ನು ಹೋಲುವಂತೆ ಕಾಣುತಿದ್ದಿತು. ಆ ಮಹಾ ಶಿಲೆಯನ್ನೇ ವಿಘ್ನೇಶ್ವರನೆಂದು ಭಾವಿಸಿ ಅಗಸ್ತ್ಯನು ಅದಕ್ಕೆ ನಮಸ್ಕಾರ ಮಾಡಿ, "ಮಹಾ ಗಣಪತೀ, ತಪಸ್ಸಿನ ಹೊರತು ಬೇರೆ ಧ್ಯಾನವಿಲ್ಲದವನು ನಾನು. ಧನ ಸಂಪಾದನೆಗೆ ಬೇಕಾದ ವಿದ್ಯೆಗಳೊಂದೂ ನನಗೆ ತಿಳಿಯದು. ಆದರೂ ನನಗೆ ಈಗ ಬೇಕಾದ ಧನವು ಹೇಗೆ ಸಿಗುತ್ತದೆಂದು ನೀನೇ ತೋರಿಸಬೇಕು. ನನಗೊಂದು ಒಳ್ಳೆಯ ದಾರಿ ನೀನೇ ತೋರಿಸಯ್ಯಾ ವಿಘ್ನೇಶ್ವರಾ!" ಎಂದು ಬೇಡಿಕೊಂಡನು.

ಆಗ, "ಇದೇನು ಮಹರ್ಷೀ! ಬರೀ ಶಿಲೆಯೊಂದಿಗೆ ಏನೋ ಚರ್ಚೆ ಮಾಡುವಿಯಲ್ಲಾ?" ಎನ್ನುತ್ತ ವಿಘ್ನೇಶ್ವರನು ಅವನ ಮುಂದೆ ಸಾಕ್ಷಾತ್ಕಾರನಾದನು.



ಅಗಸ್ತ್ಯನು ವಿಘ್ನೇಶ್ವರನಿಗೆ ಪ್ರಣಾಮ ಮಾಡಿ, ತನ್ನ ಸಮಸ್ಯೆಯನ್ನೂ ಕೋರಿಕೆಯನ್ನೂ ಗಣಪತಿಯೊಂದಿಗೆ ಹೇಳಿದನು.

ಅದನ್ನು ಕೇಳಿ ವಿಘ್ನೇಶ್ವರನು ಮುಗುಳು ನಗುತ್ತ. "ಅಗಸ್ತ್ಯ ಮಹರ್ಷೀ! ಬರಬೇಕಾದ ಸ್ಥಳಕ್ಕೇ ಬಂದಿರುವಿ. ಯಾವನು ಬರಬೇಕೋ ಅವನೇ ಬಂದ ಹಾಗಾಯಿತು. ಇನ್ನು ಸ್ವಲ್ಪ ಹೊತ್ತಿಗೆ ದೊಡ್ಡ ಧರ್ಮಿಷ್ಠನ ಹಾಗೆ ಇಲ್ವಲನು ಬಂದು ನಿನ್ನನ್ನು ಭೋಜನಕ್ಕೆ ಆಮಂತ್ರಿಸುತ್ತಾನೆ. ತಪ್ಪದೆ ಹೋಗು. ಅನಂತ ಧನರಾಶಿ ಅವನ ಹತ್ತಿರ ಬಿದ್ದು ನರಳಿಕೊಂಡಿದೆ. ಇಲ್ವಲನ ಮೂಲಕ ನಿನ್ನಿಂದಾಗಬೇಕಾದ ಕಾರ್ಯ ಬಹಳ ಮಹತ್ವದ್ದು. ನಿನಗೂ ದೊಡ್ಡ ಲಾಭವಾಗುತ್ತದೆ." ಎಂದನು.

ಅಗಸ್ತ್ಯನು ಗಣಪತಿಯೊಂದಿಗೆ, "ದೇವಾ, ಈ ಮಹಾ ಶಿಲೆಯಲ್ಲಿ ನಿನ್ನ ಹೋಲಿಕೆಗಳು ನನಗೆ ಕಾಣುತ್ತವೆ. ಆದುದರಿಂದ ಈ ಶಿಲೆಯನ್ನು ಅಪೂರ್ವ ಗಣಪತಿ ವಿಗ್ರಹವಾಗುವ ಹಾಗೆ ರೂಪಿಸಬೇಕೆಂದು ನನಗೆ ಆಶೆ. ಈ ಆಶೆಯನ್ನೂ ಸಫಲಗೊಳಿಸು" ಎಂದು ಬೇಡಿದನು.

"ಹಾಗೆಯೇ ಆಗುತ್ತದೆಂದು ನಂಬು" ಎಂದು ಹೇಳಿ ವಿಘ್ನೇಶ್ವರನು ಅಂತರ್ಧಾನನಾದನು.

ಆ ಸಮಯಕ್ಕೆ ಅಗಸ್ತ್ಯನು ತುಂಬಾ ಬಳಲಿದ್ದನು. ಹಸಿವೂ ಬಹಳವಾಗಿ ಅವನನ್ನು ಪೀಡಿಸುತ್ತಿತ್ತು. ಆ ಶಿಲೆಗೆ ಒರಗಿ ಕುಳಿತುಕೊಂಡು ಆಯಾಸ ಪರಿಹಾರ ಮಾಡಿಕೊಳ್ಳುತ್ತಿರಲು, ಇಲ್ವಲನು ಕೆಲಮಂದಿ ಅತಿಥಿಗಳನ್ನು ಕರೆದುಕೊಂಡು ತನ್ನತ್ತಲೇ ಬರುವುದನ್ನು ನೋಡಿದನು. ಜ್ಞಾನದೃಷ್ಟಿಯಿಂದ ಇಲ್ವಲನ ರಹಸ್ಯವೆಲ್ಲವೂ ಅಗಸ್ತ್ಯನಿಗೆ ಕ್ಷಣಮಾತ್ರದಲ್ಲಿ ಗೊತ್ತಾಯಿತು.

ಆ ಅರಣ್ಯದಲ್ಲಿ ವಾತಾಪಿ ಮತ್ತು ಇಲ್ವಲರೆಂಬ ಮಹಾ ಮಾಯಾವಿಗಳಾದ ರಾಕ್ಷಸರು ಅರಣ್ಯದಲ್ಲಿರುವ ಋಷಿಗಳನ್ನೂ, ಯಾತ್ರಿಕರನ್ನೂ, ಪ್ರಯಾಣಿಕರನ್ನೂ ಉಪಾಯವಾಗಿ ಕೊಂದು, ಅವರ ಹತ್ತಿರ ಇದ್ದ ಧನವನ್ನು ದೋಚಿಕೊಂಡು ದೊಡ್ಡದೊಂದು ಕಲ್ಲಿನ ದುರ್ಗದೊಳಗೆ ಕೂಡಿಸಿಡುತ್ತಿದ್ದರು. ಧರ್ಮವೇ ಮೂರ್ತಿಭವಿಸಿದಂತಹ ಮಹಾರಾಜನ ವೇಷದಲ್ಲಿ ಇಲ್ವಲನು, ಅತಿಥಿಗಳಾಗಿ ಕರೆದುಕೊಂಡು ಬಂದವರಿಗೆ ತುಂಬಾ ವಿನಯ ವಿಧೇಯತೆಗಳಿಂದ ಮರ್ಯಾದೆ ಮಾಡಿ, ಕುಶಲಪ್ರಶ್ನೆ ಮಾಡಿಕೊಂಡಿರುವ ಸಮಯದಲ್ಲಿ, ವಾತಾಪಿ ಕೊಬ್ಬಿದ ದೊಡ್ಡ ಹೋತವಾಗಿ ಮಾರ್ಪಡುತ್ತಾನೆ. ಇಲ್ವಲನು ಆ ಹೋತವನ್ನು ಕೊಂದು ಅಡಿಗೆ ಮಾಡಿಸಿ, ಅತಿಥಿಗಳಿಗೆ ಮೇಕೆ ಮಾಂಸದ ಭೋಜನ ಬಡಿಸುತ್ತಾನೆ,

ಭೋಜನಾನಂತರ ಅತಿಥಿಗಳು ಭುಕ್ತಾಯಾಸದಿಂದ ವಿಶ್ರಮಿಸಿಕೊಂಡಿದ್ದ ಸಮಯದಲ್ಲಿ ಇಲ್ವಲನು ಕೊರಳೆತ್ತಿ "ಬಾರೋ ವಾತಾಪೀ" ಎಂದು ಕರೆಯುವನು. ವಾತಾಪಿ ಅತಿಥಿಗಳ ಹೊಟ್ಟೆಯನ್ನು ಸೀಳಿಕೊಂಡು ಬರುವನು. ಇಂತಹ ಆ ದುರ್ಮಾರ್ಗಿ



ಗಳ ಈ ಕೆಲಸವನ್ನು ತಿಳಿದು ಅಗಸ್ತ್ಯನಿಗೆ ಅತ್ಯಂತ ಕೋಪ ಉಂಟಾಯಿತು.

ಇಲ್ವಲನು ಅಗಸ್ತ್ಯನ ಬಳಿಗೆ ಬರುತ್ತಾ, 'ಇವನಾವನೋ ದೊಡ್ಡ ಋಷಿಯಾಗಿದ್ದಾನೆ. ಇಂತಹವರನ್ನು ಬದುಕಿರಲು ಬಿಡುವುದು ನನಗೆ ಒಳ್ಳೆಯದಲ್ಲ. ಇವನ ಕಣ್ಣು ಜ್ಞಾನ ದೃಷ್ಟಿಯುಳ್ಳುದಾಗಿದೆ. ಇವನನ್ನು ಕೊಲ್ಲದೆ ಬಿಟ್ಟರೆ ಘಾತವಾದೀತು' ಅಂದುಕೊಂಡು, ಅಗಸ್ತ್ಯನಿಗೆ ವಿನಯದಿಂದ ವಂದಿಸಿ, ಈ ಹೊತ್ತಿಗೆ ತನ್ನ ಅತಿಥಿಯಾಗಿ ಬಂದು ತನ್ನ ಮನೆಯನ್ನು ಪಾವನಮಾಡಬೇಕೆಂದು ಆಹ್ವಾನಿಸಿದನು.

ಅಗಸ್ತ್ಯನು ತುಂಬ ಹಸಿದವನಂತೆ, ಅತ್ಯಾನಂದವನ್ನು ತೋರಿಸಿ, "ಓ ಧರ್ಮದಾತಾ! ನಿನ್ನಂತಹ ಉತ್ತಮ ರಾಜರಿರುವುದರಿಂದಲೇ ಈ ಭೂಮಂಡಲವು ಅನಂತಾಕಾಶದಲ್ಲಿ ನಿಂತಿದೆ. ಎಲ್ಲಿ ನಿಮ್ಮ ಮನೆ, ಬಹಳ ದೂರವೇನಿಲ್ಲವಷ್ಟೆ?" ಎಂದು ಇಲ್ವಲನೊಂದಿಗೆ ಹೊರಟನು.

"ಅದೋ, ಅಲ್ಲಿ ಕಾಣುತ್ತಿದೆಯಲ್ಲಾ, ಕಲ್ಲಿನ ಅರಮನೆ. ಅದೇ" ಎಂದನು ಇಲ್ವಲ ನಡೆಯುತ್ತಾ.

"ಅಯ್ಯಾ ಧರ್ಮದಾತಾ! ಒಂದು ಪ್ರತ್ಯೇಕ ಪ್ರಾರ್ಥನೆ. ಸಾವಿರ ಯಾಗಗಳನ್ನು ಮಾಡಿಸಿ ಉಪವಾಸವಿದ್ದ ನನಗೆ ನೀನು ಮಾಡಿಸಿದ ಅಡಿಗೆಯನ್ನು ಮೊದಲು ನನಗೇ ಬಿಡಿಸಿಬಿಡು. ಊಟವೆಂಬ ಹೆಸರು ಕೇಳಿದ ಕೂಡಲೇ ನನ್ನ ಹೊಟ್ಟೆಯ ಹಸಿವೆ ಭುಗಿಲೆದ್ದುಬಿಟ್ಟಿತು. ಆ ಹೆಸರು ಕೇಳದಿರುತ್ತಿದ್ದರೆ ಇನ್ನೆಷ್ಟು ದಿನವಾದರೂ ಉಪವಾಸವಿರುತ್ತಿದ್ದೆನು. ನಿನ್ನೊಂದಿಗೆ ಇನ್ನೂ ಕೆಲವರು ಆಮಂತ್ರಿತರಿರುವ ಹಾಗಿದೆ. ನಾನು ಮೊದಲು ಭೋಜನ ಮಾಡುವುದಕ್ಕೆ ಇವರ ಅನುಮತಿ ಕೇಳುತ್ತೇನೆ. ಏಕೆಂದರೆ ಮಾಡಿದ ಅಡಿಗೆ ನನಗೊಬ್ಬನಿಗೇ ಸರಿಹೋಗುವುದರಿಂದ, ಇವರಿಗಾಗಿ ಬೇರೆ ಅಡಿಗೆ ಮಾಡಿಸಬೇಕಾದೀತಷ್ಟೆ?" ಎಂದು ನಡೆಯುತ್ತಾ ಹೇಳಿದ ಅಗಸ್ತ್ಯನ ಮಾತು ಕೇಳಿ, ಇತರ ಅತಿಥಿಗಳು, "ಹಾಗೇ ಆಗಲಿ. ಮೊದಲು ಇವರದೇ ಊಟವಾಗಲಿ. ನಮಗೇನೂ ಅವಸರವಿಲ್ಲ." ಎಂದರು.

ಅಷ್ಟರಲ್ಲಿ ಇಲ್ವಲನ ದುರ್ಗದ ಮನೆ ಬಂದಿತು. ವಾತಾಪಿ ಈ ಮೊದಲೇ ಅತಿಥಿಗಳ ಆಗಮನವನ್ನು ತಿಳಿದು ತನ್ನ ಮಾಯದ ಅಡಿಗೆಯನ್ನು ಮಾಡಿಸಿಕೊಂಡು ತಯಾರಾಗಿದ್ದನು. ಹೇಳಿದ ಹಾಗೆಯೇ ಅಗಸ್ತ್ಯನಿಗೆ ಇಲ್ವಲನು ಕೂಡಲೇ ಭೋಜನ ಬಡಿಸಿದನು. ಮಾಡಿಟ್ಟ ಅಡಿಗೆಯಷ್ಟನ್ನೂ ಅಗಸ್ತ್ಯನು ಉಂಡುದನ್ನು ನೋಡಿ, ಇಲ್ವಲನು 'ಅಬ್ಬಾ ಇವನ ಹಸಿವೆಯೇ!' ಎಂದು ಮೂಗಿನ ಮೇಲೆ ಬೆರಳಿಟ್ಟನು.

'ನೀವು ಬಹು ದೊಡ್ಡ ಘನಪಾಟಿಗಳಾಗಿದ್ದೀರಿ. ಉಪವಾಸಕ್ಕೂ ಸಮರ್ಥರು, ಭೋಜನಕ್ಕೂ ಸಮರ್ಥರು! ಇನ್ನು ಮುಂದಿನ ಜನ್ಮಕ್ಕೇ ಭೋಜನ ಮಾಡುವಿರೋ ಏನೋ! ನಿಮ್ಮನ್ನು ತೃಪ್ತಿಪಡಿಸಿ

ನನ್ನ ಜನ್ಮ ಸಾರ್ಥಕವಾಯಿತು.' ಎಂದನು ಇಲ್ವಲ. 'ನನ್ನನ್ನು ಹೊಗಳುವುದಿರಲಿ. ಉಳಿದವರಿಗೂ ಬೇಗ ಹೊಸ ಅಡಿಗೆ ಮಾಡಿಸಿ ಬಡಿಸಿಬಿಡು, ನಾನು ಸ್ವಲ್ಪ ವಿಶ್ರಾಂತಿ ಪಡೆದು ನನ್ನ ದಾರಿ ಹಿಡಿಯುತ್ತೇನೆ' ಎಂದು ಅಗಸ್ತ್ಯನು ತೇಗಿದನು.

ಇಲ್ವಲನು 'ಇನ್ನು ನಿನಗೆ ಚಿರವಿಶ್ರಾಂತಿಯೇ ಸರಿ!' ಎಂದು ಹೇಳಿಕೊಳ್ಳುತ್ತಾ ಆಚೆಗೆ ಹೋಗಿ, "ವಾತಾಪೀ, ಬೇಗಬಾರೋ" ಎಂದು ಗಟ್ಟಿಯಾಗಿ ಕರೆದನು. ಅಗಸ್ತ್ಯನು, 'ಇನ್ನೆಲ್ಲಿಯ ವಾತಾಪಿಯೋ ಇಲ್ವಲಾ ? ವಾತಾಪಿ ಜೀರ್ಣನಾದನೋಯ್ ! ಇನ್ನು ಬಾರನು ! ವಾತಾಪಿ ಪೂರ್ತಿಜೀರ್ಣ !' ಎಂದು ಹೊಟ್ಟೆಯನ್ನು ತಡವುತ್ತಾ ಹೇಳಿದನು.

ಆ ಮಾತು ಕೇಳಿ ಇಲ್ವಲನ ಕೈ ಕಾಲುಗಳು ಕತ್ತರಿಸಿದುವು. 'ಇಲ್ವಲಾ ! ಇನ್ನು ನೀನೊಬ್ಬನೇ ಆದೆ, ಏಕಿರಬೇಕು ?' ಎನ್ನುತ್ತಾ ಅಗಸ್ತ್ಯನು ತನಗಿಂತ ದೊಡ್ಡ ರಾಕ್ಷಸನ ಹಾಗೆ ಎದ್ದು ತನ್ನ ಬಳಿಗೆ ಬರುವುದನ್ನು ನೋಡಿ ಇಲ್ವಲನು ಬಹು ವೇಗವಾಗಿ ಓಡಿ ಹೋದನು. ಈ ವಿಧವಾಗಿ ವಾತಾಪೀ ಇಲ್ವಲರ ಮಾಯಾ ನಾಟಕವು ಅಂತ್ಯವಾಯಿತು. ಉಳಿದ ಅತಿಥಿಗಳೂ, ಪ್ರಯಾಣಿಕರೂ ಉಳಿದರು.

ಅಗಸ್ತ್ಯನು ಅಲ್ಲಿರುವ ಅತಿಥಿಗಳಿಗೆ ನಡೆದ ಸಂಗತಿಯನ್ನು ಹೇಳಿ ಕಲ್ಲಿನ ದುರ್ಗದಲ್ಲಿ ರಾಶಿರಾಶಿಯಾಗಿರುವ ಅಸ್ಥಿಪಂಜರಗಳನ್ನೂ, ಕಪಾಲಗಳನ್ನೂ ತೋರಿಸಿದನು. ಅವರು ಹೆದರಿ ತಮ್ಮನ್ನೆಲ್ಲ ಕಾಪಾಡಿದ ಅಗಸ್ತ್ಯನಿಗೆ ನಮಸ್ಕರಿಸಿ ಹೊರಟುಹೋದರು.

ಆ ದುರ್ಗದಲ್ಲಿ ಭದ್ರಪಡಿಸಿಟ್ಟಿರುವ ಧನದ ರಾಶಿಯನ್ನೂ ಅಗಸ್ತ್ಯನು ನೋಡಿದನು. ತನಗೆ ಬೇಕಾದಷ್ಟು ಧನವನ್ನು ಇಟ್ಟುಕೊಂಡು, ಉಳಿದ ಧನದಿಂದ ಒಂದು ಮಹಾ ನಗರವನ್ನು ನಿರ್ಮಿಸಬಹುದಾಗಿತ್ತು. ಅಲ್ಲಿ ಸಾವಿರಾರು ಜನರಿಗೆ ಸುಖ ನಿವಾಸ ಕಲ್ಪಿಸಬಹುದೆಂದು ಅವನಿಗೆ ತೋರಿತು.

ಕೂಡಲೇ ಅಗಸ್ತ್ಯನು ಎಲ್ಲರಿಗೂ ಧನವನ್ನು ಹಂಚಲು ಮೊದಲು ಮಾಡಿದನು. ಸಮೀಪ ರಾಜ್ಯಗಳಿಂದ ಅನೇಕ ಮಂದಿ ಪ್ರಜೆಗಳು ಅಲ್ಲಿಗೆ ಬಂದು ಸೇರಿಕೊಂಡು ಅಗಸ್ತ್ಯನು ಕೊಟ್ಟ ಧನದಿಂದ ಅಲ್ಲಿಯೇ ಮನೆ ಕಟ್ಟಿಕೊಂಡು ಸ್ಥಿರಪಟ್ಟರು.

ಅಗಸ್ತ್ಯನಿಗೆ ವಿಘ್ನೇಶ್ವರನ ಆಕಾರವಾಗಿ ಕಾಣಿಸಿದ ಮಹಾ ಶಿಲೆಯನ್ನು ಕೇಂದ್ರವಾಗಿಟ್ಟುಕೊಂಡು ಅದರ ಸುತ್ತಲೂ ಒಂದು ಮಹಾನಗರವು ಸೃಷ್ಟಿಯಾಯಿತು. ವಾತಾಪಿಯ ಜೀರ್ಣಕೆಯಿಂದ ಉಂಟಾದ ಆ ನಗರವು ವಾತಾಪಿನಗರವೆಂದು ಹೆಸರು ಪಡೆಯಿತು. ಅಗಸ್ತ್ಯನು ರಾಜ್ಯ ಪರಿಪಾಲನೆಯ ಸೂತ್ರಗಳನ್ನು ಶಿಲಾಫಲಕಗಳಲ್ಲಿ ಕೆತ್ತಿಸಿ, ಆದರ್ಶಪ್ರಾಯರಾದ ಪ್ರಜಾರಾಜ್ಯವನ್ನು ಏರ್ಪಡಿಸಿದನು.





# ಗಂಧರ್ವೇಂದ್ರನ ಮಗಳು

೬

**ರಾ**ಣಿ ಜುಬೇದಾಳ ಆಜ್ಞೆಯ ಮೇರೆಗೆ ಮಸ್ರೂರ್ ಕೂಡಲೇ ಹಸನ್ನನ ಮನೆಗೆ ಹೋಗಿ ಬಾಗಿಲು ತಟ್ಟಿದನು. ಹಸನ್ನನ ತಾಯಿ ಬಾಗಿಲು ತೆರೆದು ಭವ್ಯನಾಗಿ ನಿಂತಿದ್ದ ಮಸ್ರೂರನನ್ನು ನೋಡಿ ಸ್ವಲ್ಪ ಬೆದರುತ್ತ, "ಯಾರು ನೀವು? ಏನು ಬೇಕು?" ಎಂದು ಕೇಳಿದಳು.

"ನನ್ನ ಹೆಸರು ಮಸ್ರೂರ್. ನಾನು ದೇಶವನ್ನಾಳುವ ಖಲೀಫರ ಅಂಗರಕ್ಷಕ. ಈ ಮನೆಯಲ್ಲಿರುವ ಹುಡುಗಿಯನ್ನು ಕರೆದುಕೊಂಡು ಬರಬೇಕೆಂದು ನಮ್ಮ ರಾಣಿಯವರ ಆಜ್ಞೆಯಾಗಿದೆ. ಆಕೆಯನ್ನು ಕರೆದುಕೊಂಡು ಬಾರಮ್ಮ" ಎಂದನು ಮಸ್ರೂರ್.

ಹಸನ್ನನ ತಾಯಿಗೆ ನಿಜಕ್ಕೂ ಭಯವೆದ್ದಿತು. ಅವಳು ನಡುಗುವ ಸ್ವರದಿಂದ, "ಅಪ್ಪಾ ಮಸ್ರೂರ್, ನಾವು ಈ ಊರಿಗೆ ಹೊಸಬರು. ನನ್ನ ಮಗ ದೂರ ದೇಶಕ್ಕೆ ಪ್ರಯಾಣ ಹೋಗಿದ್ದಾನೆ. ಹೋಗುವಾಗ ತನ್ನ ಹೆಂಡತಿಯನ್ನು ಮನೆಯ ಹೊಸ್ತಿಲು ದಾಟಿಸಬೇಡವೆಂದು ಒತ್ತಿ ಹೇಳಿದ್ದಾನೆ. ಅವಳು ಹೊರಗೆ ಹೋದರೆ ಏನೋ ಕೆಡುಕು ಮೂಡುತ್ತದಪ್ಪಾ! ಅವಳಿಗೆ ಏನಾದರೂ ಆದರೆ ನನ್ನ ಮಗ ಬದುಕಲಾರನಲ್ಲಾ! ಏನು ಮಾಡಲಪ್ಪಾ?" ಎಂದಳು.

"ಕರೆಸಿಕೊಳ್ಳುವವರು ಬೇರಾರೂ ಅಲ್ಲವಮ್ಮಾ, ನಮ್ಮ ರಾಣಿಯೇ. ಏನೂ ಭಯವಿಲ್ಲ. ನಮ್ಮ ರಾಣಿಯವರು ನಿನ್ನ ಸೊಸೆಯ ಅಂದಚೆಂದಗಳನ್ನು ಕೇಳಿ, ಸುಮ್ಮನೆ ನೋಡಬೇಕೆಂಬ ಉದ್ದೇಶದಿಂದಲೇ ಕರೆಕಳಿಸಿದ್ದಾರೆ. ಆ ಹುಡುಗಿಗೆ ಏನೂ ಆಗದ ಹಾಗೆ ನಾನಿಲ್ಲವೇ? ಕ್ಷೇಮವಾಗಿ ಕರೆದುಕೊಂಡು ಹೋಗಿ ಕ್ಷೇಮವಾಗಿ ಕರೆತಂದು ಬಿಡುತ್ತೇನಮ್ಮಾ, ಹೀಗೆ ಎಷ್ಟು ಮಂದಿಯನ್ನು ಕರೆದುಕೊಂಡು ಮನೇ ಹತ್ತಿರ ಬಿಟ್ಟಿದ್ದೇನೆ ಗೊತ್ತಾ?" ಎಂದನು ಮಸ್ರೂರ್.

ಪರಿಸ್ಥಿತಿ ಅನಿವಾರ್ಯಕ್ಕೆ ಬಂದಿತೆಂದು ಹಸನ್ನನ ತಾಯಿಗೆ ಗೊತ್ತಾಯಿತು. ಅವಳು ಒಳಗೆ ಹೋಗಿ ತನ್ನ ಸೊಸೆಗೂ, ಅವಳಿ ಜವಳಿ ಮೊಮ್ಮಕ್ಕಳಿಗೂ ಒಳ್ಳೆಯ ದುಸ್ತುಗಳಿಂದ ಅಲಂಕಾರ ಮಾಡಿಸಿದಳು. ತರುವಾಯ ಅವರೊಂದಿಗೆ ತಾನು ಕೂಡಾ ಮಸ್ರೂರನ ಹಿಂದೆ ಖಲೀಫರ ಭವನಕ್ಕೆ ಹೊರಟಳು.



ಅವರು ಬಂದು ತಲಪುವಾಗ ರಾಣಿ ಜುಬೇದಾ ಸಿಂಹಾಸನದ ಮೇಲೆ ಕುಳಿತಿದ್ದಳು. ಅವಳ ಸುತ್ತಲೂ ಅನೇಕ ಮಂದಿ ದಾಸಿಯರಿದ್ದರು. ಅವರೊಂದಿಗೆ ತೂಫಾ ಕೂಡಾ ಇದ್ದಳು.

ಜುಬೇದಾ ಹಸನ್ನನ ಹೆಂಡತಿಯೊಂದಿಗೆ "ಬಾರೇ ಹುಡುಗೀ! ಸಂತೋಷ! ಇಲ್ಲಿ ಗಂಡುಸರಾರೂ ಇಲ್ಲ, ಶಂಕಿಸಬೇಡ. ನಿನ್ನ ಮುಸುಗನ್ನು ತೆಗೆಯ ಬಹುದು" ಎನ್ನುತ್ತ ತೂಫಾಳನ್ನು ನೋಡಿದಳು. ತೂಫಾ ಮುಂದೆ ಬಂದು ಹಸನ್ನನ ಹೆಂಡತಿಯ ಮುಖದ ಮುಸುಕನ್ನು ಅತ್ಯಂತ ವಿನಯದಿಂದ ತೆಗೆದಳು. ಜಗ್ಗನೆ ಮೇಘದ ಮರೆಯಿಂದ ಹೊರ ಬಿದ್ದ ಪೂರ್ಣ ಚಂದ್ರ ಬಿಂಬದಂತೆ ಬೆಳಗಿದ ಗಂದರ್ವೇಂದ್ರನ ಮಗಳ ಮುಖವನ್ನು ನೋಡಿ ದಾಸಿಯರೆಲ್ಲ ಒಮ್ಮೆಗೇ ಆಶ್ಚರ್ಯದಿಂದ ಉಸಿರು ಬಿಡುವುದನ್ನೇ ಮರೆತರು. "ಎಂಥಾ ಸೌಂದರ್ಯ ವಿದು!" ಎಂದು ತಮ್ಮೊಳಗೇ ಗುಸುಗುಟ್ಟಿದರು.

ಜುಬೇದಾರಾಣಿ ತನ್ನನ್ನೇ ಮರೆತು ಸಿಂಹಾಸನ ದಿಂದ ಎದ್ದು ಬಂದು ಹಸನ್ನನ ಹೆಂಡತಿಯನ್ನು ಆಲಿಂಗನ ಮಾಡಿಕೊಂಡಳು. ಆಮೇಲೆ ಅವಳನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿಕೊಂಡು ತನ್ನ ಕೊರಳಲ್ಲಿದ್ದ ಹತ್ತೆಳೆಗಳ ಮುತ್ತಿನ ಹಾರವನ್ನು ಅವಳ ಕೊರಳಿಗೆ ಹಾಕಿದಳು. ಆ ಮುತ್ತಿನ ಹಾರವು ಜುಬೇದಾ ಖಲೀಫರನ್ನು ಮದುವೆಯಾದ ಕಾಲ ದಿಂದಲೂ ಅವಳ ಕೊರಳನ್ನು ಅಲಂಕರಿಸಿಕೊಂಡು ಬಂದಿತ್ತು. ಅದು ಈಗ ಹಸನ್ನನ ಹೆಂಡತಿಗೆ ಕಾಣಿಗೆ ಯಾಗಿ ಸಂದಿತು.

"ಹುಡುಗೀ, ನಿನಗೆ ಆಟಗಳೇನಾದರೂ ಗೊತ್ತೇ? ಹಾಡುವಿಯಾ? ನೃತ್ಯ ಮಾಡುವಿಯಾ? ನಿನ್ನಂಥ ವಳಿಗೆ ಅವೆಲ್ಲ ತಿಳಿಯದೆ ಇರಲಾರದು, ಅಲ್ಲವೆ?" ಎಂದಳು ಜುಬೇದಾರಾಣಿ ವಾತ್ಸಲ್ಯದಿಂದ.

"ಸಾಧಾರಣವಾಗಿ ಹೆಣ್ಣು ಮಕ್ಕಳು ಕಲಿಯು ವಂಥ ಹಾಡು ಕುಣಿತಗಳೊಂದೂ ನನಗೆ ಬಾರವು. ಆದರೆ ನಿಮಗೆಲ್ಲಾ ಆಶ್ಚರ್ಯವಾಗುವಂಥ ಒಂದು ವಿದ್ಯೆ ನನಗೆ ಗೊತ್ತು. ನಾನು ಪಕ್ಷಿಯ ಹಾಗೆ ಹಾರು ತ್ತೇನೆ!" ಎಂದಳು ಇಂಪಾದ ದನಿಯಲ್ಲಿ ಹಸನ್ನನ ಹೆಂಡತಿ. ಅದನ್ನು ಕೇಳಿ ದಾಸಿಯರೆಲ್ಲಾ "ಅದ್ಭುತ! ಆಶ್ಚರ್ಯ!" ಎಂದರು.

"ಹೌದೇನು? ರೆಕ್ಕೆಗಳಿಲ್ಲದೆ ಅದು ಹೇಗೆ ಹಾರುತ್ತೀ? ನಾನು ನೋಡಬೇಕಲ್ಲ? ಒಂದುಸಾರಿ ಹಾರಿತೋರಿಸುವೆಯಾ?" ಎಂದು ಕೇಳಿದಳು ಜುಬೇದಾರಾಣಿ.

"ರೆಕ್ಕೆಗಳಿಲ್ಲದೆ ಉಂಟೇನು? ನನಗೆ ಪಕ್ಷಿಯುದೇ ಒಂದು ತೊಡುಗೆಯುಂಟು. ನನ್ನ ಅತ್ತೆಯವರನ್ನು ಕಳುಹಿಸಿದರೆ ತರುತ್ತಾರೆ" ಎಂದಳು ಹಸನ್ನನ ಹೆಂಡತಿ.

ಜುಬೇದಾ ಹಸನ್ನನ ತಾಯಿಯನ್ನು ನೋಡಿ, "ಅಮ್ಮಾ, ನೀವು ಹೋಗಿ ಆ ಪಕ್ಷಿ ತೊಡುಗೆಗಳನ್ನು ತರುವಿರಾ?" ಎಂದಳು.

ಹಸನ್ನನ ತಾಯಿಯ ಎದೆಗೆ ಕಲ್ಲು ಬಿದ್ದ ಹಾಗಾಯಿತು. ಇನ್ನು ತಮ್ಮನ್ನು ಅಲ್ಲಾ ಮಾತ್ರವೇ ರಕ್ಷಿಸಬೇಕೆಂದು ಮನಸ್ಸಿನಲ್ಲಿ ಪ್ರಾರ್ಥಿಸಿಕೊಳ್ಳುತ್ತ, ಜುಬೇದಾಳನ್ನು ನೋಡಿ,"ಮನುಷ್ಯರು ಯಾರಾದರೂ ಪಕ್ಷಿತೊಡುಗೆ ಉಪಯೋಗಿಸುತ್ತಾರೋ ? ಇವಳು ಮತಿಚಲನೆಯಿಂದ ಏನೋ ಹೇಳುತ್ತಿದ್ದಾಳೆ. ಅದಕ್ಕಿಂತ ಹೆಚ್ಚೇನೂ ಇಲ್ಲ ಇದರಲ್ಲಿ" ಎಂದಳು.

ಆಗ ಹಸನ್ನನ ಹೆಂಡತಿ ಅತ್ತೆಯ ಮಾತಿಗೆ ಅಡ್ಡ ಬಂದು, "ನನಗೆ ಬುದ್ಧಿ ಸರಿಯಾಗೇ ಇದೆ ಅತ್ತೆ. ನಾನು ಹೇಳಿದ ಪಕ್ಷಿಯ ತೊಡುಗೆ ನಮ್ಮ ಮನೆಯಲ್ಲೆಲ್ಲಿಯೋ ಭದ್ರವಾಗಿ ಅಡಗಿಸಿಡಲ್ಪಟ್ಟಿದೆ. ಸರಿಯಾಗಿ ಹುಡುಕಿದರೆ ಸಿಕ್ಕದೇ ಇರದು" ಎಂದಳು.

ಜುಬೇದಾರಾಣಿ ತನ್ನ ಕೈಯಲ್ಲಿದ್ದೊಂದು ಅಮೂಲ್ಯವಾದ ಆಭರಣವನ್ನು ತೆಗೆದು ಮುದುಕಿಗೆ ಕೊಡುತ್ತ, "ಅಮ್ಮಾ, ಆ ವಿಚಿತ್ರ ತೊಡುಗೆಯನ್ನು ತರಲೇಬೇಕು. ಅದನ್ನು ಕೂಡಾ ನಾನು ನೋಡಲೇಬೇಕು. ನನ್ನಾಣೆ! ಎಷ್ಟು ಹೊತ್ತು! ಒಂದೆರಡು ಕ್ಷಣ ಆನಂದಪಟ್ಟು ಆ ತೊಡುಗೆಯನ್ನು ಮತ್ತೆ ನಿಮಗೇ ಕೊಡುತ್ತೇನೆ" ಎಂದಳು.

ಆದರೂ ಹಸನ್ನನ ತಾಯಿ ತನಗೆ ಆ ತೊಡುಗೆಯ ಸಂಗತಿ ಗೊತ್ತೇ ಇಲ್ಲವೆಂದು ಸಾಧಿಸಿಕೊಂಡಿದ್ದಳು. ಅವಳ ಮೂರ್ಖ ಹಟಕ್ಕೆ ಜುಬೇದಾ ರಾಣಿಗೆ ಕೋಪ ಬಂದಿತು. ಅವಳು ಮಸ್ರೂರನ್ನು ಕರೆದು ಹಸನ್ನನ ಮನೆಯನ್ನೆಲಾ ಶೋಧಿಸಿ ಪಕ್ಷಿಯತೊಡುಗೆ ಎಲ್ಲಿದ್ದರೂ ತಂದೇ ತೀರಬೇಕೆಂದು ಆಜ್ಞಾಪಿಸಿದಳು. ಮನೆಯ ಬೀಗದ ಕೈಯನ್ನು ಹಸನ್ನನ ತಾಯಿಯ ಕೈಯಿಂದ ದಾಸಿಯರ ಮೂಲಕ ತೆಗೆಯಿಸಿ ಮಸ್ರೂರಿಗೆ ಕೊಡಿಸಿದಳು.

ಮಸ್ರೂರ್ ಬೇಗನೇ ಹೋಗಿ ಹಸನ್ನನ ಮನೆಯನ್ನೆಲ್ಲಾ ಗಾಳಿಸಿ, ಕಡೆಗೆ ಪಕ್ಷಿಯ ತೊಡುಗೆಯನ್ನು ಕಂಡು ಹಿಡಿದು ತಂದನು.




ಜುಬೇದಾ ಅದನ್ನು ಅತಿ ಕೌತುಕದಿಂದ ಸ್ವಲ್ಪ ಹೊತ್ತು ಪರೀಕ್ಷಿಸಿ ನೋಡಿ, ಅದರ ರಚನಾ ವಿಶೇಷಗಳಿಗೆ ಆಶ್ಚರ್ಯ ಪಟ್ಟು, ಆಮೇಲೆ ಹಸನ್ನನ ಹೆಂಡತಿಯ ಕೈಗೆ ಕೊಟ್ಟಳು.

ಅವಳು ಅದನ್ನು ಪಡೆದುಕೊಂಡು, ಪ್ರತಿ ಗರಿಯನ್ನೂ ಪರೀಕ್ಷೆಮಾಡಿ ನೋಡಿ, ಅದು ಒಂದಿಷ್ಟೂ ಕೆಟ್ಟಿಲ್ಲವೆಂದುಕೊಂಡು ಸಂತೋಷಪಡುತ್ತ, ಅದನ್ನು ಧರಿಸಿಕೊಂಡಳು. ಆಮೇಲೆ ಅವಳು ಹಗುರಾಗಿ ನೆಲದಿಂದ ಮೇಲೆದ್ದು, ಆ ವಿಶಾಲವಾದ ಕೋಣೆಯ ಮೇಲೆ ಈ ಕಡೆಯಿಂದ ಆ ಕಡೆಗೆ ಹಾರಿ ವಲಯಾಕಾರವಾಗಿ ತಿರುಗಿಬಂದು ನೆಲದಲ್ಲಿ ಎರಗಿದಳು. ಆಮೇಲೆ ತನ್ನ ಇಬ್ಬರು ಮಕ್ಕಳನ್ನೂ ಎತ್ತಿ ಒಂದೊಂದು ಹೆಗಲ ಮೇಲೆ ಹಾಕಿಕೊಂಡು ಎತ್ತರವಾಗಿದ್ದ ಗವಾಕ್ಷದ ಮೇಲೆ ಹಾರಿ ಹೋಗಿ ಕುಳಿತು, "ನಾನು ನನ್ನ ಮಕ್ಕಳೊಂದಿಗೆ ಹೋಗುತ್ತಿದ್ದೇನೆ. ನನಗೆ ಅಪ್ಪಣೆ ಕೊಡಿ" ಎಂದಳು.



ಹಸನ್ನನ ತಾಯಿ ಜಮುಖಾನೆಯ ಮೇಲೆ ಹತಾಶಳಾಗಿ ಕುಸಿದು ಕಣ್ಣೀರಿಳಿಸುತ್ತ, ಅರ್ಧಬಾಯಿ ತೆರೆದು ಬಿಟ್ಟ ಕಣ್ಣಿನಿಂದ ನೋಡುತ್ತಿದ್ದಳು. ಸೊಸೆ ಅವಳನ್ನು ನೋಡಿ "ಅತ್ತೇ! ನಾನು ನಿಮ್ಮನ್ನೂ ನಿಮ್ಮ ಮಗನನ್ನೂ ಬಿಟ್ಟು ಹೋಗುತ್ತೇನೆ. ನಿಮ್ಮನ್ನು ಕುರಿತು ನನಗೆ ದುಃಖವಾಗಿಯೇ ಇದೆ. ಆದರೆ ಏನು ಮಾಡಲಿ? ಹಾರಬೇಕೆಂಬ ನನ್ನ ಮೋಹದ ಚಟ ನನ್ನನ್ನು ಪೂರ್ತಿ ಆವಹಿಸಿಬಿಟ್ಟಿದೆ. ನಾನು ಆಕಾಶದಲ್ಲಿ ಹಾರಿತೀರಬೇಕು. ನಿಮ್ಮ ಮಗ ನನ್ನನ್ನು ಹುಡುಕಲು ಪ್ರಯತ್ನಿಸಿದರೆ ವಾಕ್‌ವಾಕ್ ದ್ವೀಪಗಳಲ್ಲಿ ಹುಡುಕ ಬಹುದು. ಅಪ್ಪಣೆ!" ಎಂದವಳೇ ತನ್ನ ಮಕ್ಕಳೊಂದಿಗೆ ಗವಾಕ್ಷದ ಮೂಲಕ ಮುದುಡಿ ನುಸುಳಿ ಒಮ್ಮೆಗೇ ಆಕಾಶಕ್ಕೆ ಹಾರಿ ಪಕ್ಷಿಯ ಹಾಗೇ ಹೊರಟುಹೋದಳು, ಸ್ಮೃತಿತಪ್ಪಿ ಬಿದ್ದಿದ್ದ ಹಸನ್ನನ ತಾಯಿಯನ್ನು ಜುಬೇದಾ ರಾಣಿ ಕೈಮುಟ್ಟ ನೀರು ತಳಿದು ಎಬ್ಬಿಸಿ, "ಹೀಗೂ ಉಂಟೇ? ಏನೂ ಗೊತ್ತಿಲ್ಲವೆಂದು ಏಕೆ ನಟಿಸಿದಿ ಯಮ್ಮಾ? ಪರ್ಯವಸಾನ ಹೀಗಾಗುತ್ತದೆಂದು ಮೊದಲೇ ಹೇಳಬಾರದಿತ್ತೇ? ಇಲ್ಲಿಯವರೆಗೆ ಬರಲು ಬಿಡುತ್ತಿದ್ದೆನೋ? ಗೊತ್ತಿಲ್ಲದೆ ನಡೆದ ಈ ತಪ್ಪಿಗೆ ಕ್ಷಮಿಸಿಕೋ ಅಮ್ಮಾ!" ಎಂದಳು.

"ತಪ್ಪೆಲ್ಲವೂ ನನ್ನದೇ! ತಮ್ಮನ್ನು ನಾನು ಕ್ಷಮಿಸಲಿಕ್ಕೇನಿದೆ? ನಾನೂ ನನ್ನ ಮಗನೂ ದುಃಖದಲ್ಲೇ ಕುದಿದು ಸಾಯ ಬೇಕೆಂದು ಬರೆದಿದೆ. ಯಾರೇನು ಮಾಡುತ್ತಾರೆ?" ಎಂದು ಹಸನ್ನನ ತಾಯಿ ಮಸ್ರೂರನ ಸಹಾಯದಲ್ಲಿ ಕಾಲೆಳೆದು ಕೊಳ್ಳುತ್ತಾ ಹೇಗೋ ತನ್ನ ಮನೆ ಸೇರಿದಳು. ಒಂದು ವೇಳೆ ಸೊಸೆಯೂ ಮೊಮ್ಮಕ್ಕಳೂ ಮನೆಯಲ್ಲಿರುವರೇನೋ ಎಂದು ಭ್ರಮಿಸಿ ಮನೆಯೊಳಗೆಲ್ಲಾ ಹುಡುಕಿದಳು. ಅವರೆಲ್ಲಿ ಕಾಣುವರು? ಅವಳು ಘೋರನೆ ಅಳುತ್ತಾ ಒಂದು ದೊಡ್ಡ ಸಮಾಧಿಯನ್ನೂ, ಅದರ ಬದಿಯಲ್ಲಿ ಎರಡು ಚಿಕ್ಕ ಸಮಾಧಿಗಳನ್ನೂ ಕಟ್ಟಿಸಿ, ಹಗಲೂ ರಾತ್ರಿ ಅಳುತ್ತಾ ಕೊನೆಯ ಜೀವಹಿಡಿದುಕೊಂಡಿದ್ದಳು.

ಅಲ್ಲಿ ಹಸನ್ ಏಳು ಮಂದಿ ರಾಜಕುಮಾರಿಯರಾದ ಅಕ್ಕಂದಿರೊಂದಿಗೆ ಮೂರು ತಿಂಗಳು ಕಳೆದು, ತನ್ನನ್ನು ನೆನೆಯುತ್ತ ತನ್ನ ಹೆಂಡತಿಯೂ ತಾಯಿಯೂ ತನ್ನನ್ನು ನಿರೀಕ್ಷಿಸುತ್ತಿರುವರೆಂಬ ಚಿಂತೆಯಲ್ಲಿ ಅಕ್ಕಂದಿರಿಂದ ಅಪ್ಪಣೆ ಪಡೆದು, ಹೊರಡಲು ಸಿದ್ಧನಾದನು. ತಮಟೆಯನ್ನು ಬಾರಿಸಿದ ಕೂಡಲೇ ಒಂಟೆಗಳು ಬಂದು ಅವನಿದಿರು ನಿಂತುವು. ರಾಜಕುಮಾರಿಯರು ಕೊಟ್ಟ ಚಿನ್ನ ಬೆಳ್ಳಿ ರತ್ನಗಳನ್ನು ಆ ಒಂಟೆಗಳ ಮೇಲೆ ಹಾಕಿಕೊಂಡು ಬೇಗದಲ್ಲೇ ಬಾಗ್ದಾದು ನಗರಕ್ಕೆ ಹಿಂದಿರುಗಿ ಬಂದನು.

ಅವನು ಆತ್ಯಾತುರದಿಂದ ಮನೆಯೊಳಗೆ ಪ್ರವೇಶಿಸಿ, ತನ್ನ ತಾಯಿಯ ಗುರುತು ಹಿಡಿಯಲಾರದೆ ಹೋದನು. ಹೆಂಡತಿ ಎಲ್ಲಿ? ಮಕ್ಕಳೆಲ್ಲಿ?

ಏಕೆ ಕಾಣುವುದಿಲ್ಲ ? ಏನು ಎಲ್ಲಾ ಮೌನ ? ಎಂಬ ಕಾತರದಿಂದ ತಾಯಿಯನ್ನು ಅನೇಕ ಪ್ರಶ್ನೆ ಕೇಳಿದನು. ಅವನ ಪ್ರಶ್ನೆಗೆ ಉತ್ತರವಾಗಿ ತಾಯಿ ಅವನ ಮುಖವನ್ನೇ ಬಿಟ್ಟ ಕಣ್ಣುಗಳಿಂದ ನೋಡುತ್ತ ದೊಡ್ಡದಾಗಿ ಅಳಲು ತೊಡಗಿದಳು. ಹಸನ್ನನಿಗೆ ಬುದ್ಧಿಭ್ರಂಶವಾದಂತಾಯಿತು. ಅವನು ಮನೆಯೊಳಗೆಲ್ಲಾ ಹುಡುಕುತ್ತ, ಹೆಂಡತಿಯ ಪಕ್ಷಿತೊಡುಗೆ ಇಟ್ಟಿದ್ದಪೆಟ್ಟಿಗೆ ಖಾಲಿಯಾಗಿರುವುದನ್ನು ನೋಡಿದನು. ಮೂರು ಹೊಸ ಸಮಾಧಿಗಳು ಅವನನ್ನು ಸ್ತಬ್ಧಗೊಳಿಸಿದುವು. ಇದ್ದಕ್ಕಿದ್ದ ಹಾಗೆ ಕೆಟ್ಟದನಿಯಿಂದ ಕೂಗಿ ನೆಲಕ್ಕೆ ಬಿದ್ದನು.

ತಾಯಿ ಎಷ್ಟೇ ಉಪಚಾರ ಮಾಡಿದರೂ ರಾತ್ರಿಯಾಗುವವರೆಗೂ ಹಸನ್ನನಿಗೆ ಎಚ್ಚರ ಬರಲಿಲ್ಲ. ಎಚ್ಚರಾದ ಮೇಲೆ ಅವನು ತನ್ನ ಬಟ್ಟೆಗಳನ್ನು ಹರಿದುಕೊಂಡನು. ತಲೆಯಲ್ಲಿ ಧೂಳು ಮಣ್ಣನ್ನೂ ಬೂದಿಯನ್ನೂ ಚೆಲ್ಲಿಕೊಂಡನು. ಕತ್ತಿಯಿಂದ ತಿವಿದು ಕೊಂಡು ಸಾಯಲು ನೋಡಿದನು. ತಾಯಿ ಅಡ್ಡಗಟ್ಟಿ ತಡೆದಳು. ಕಡೆಗೆ ತಾಯಿ ಅವನನ್ನು ಸಣ್ಣ ಮಗುವಿನ ಹಾಗೆ ಮಡಿಲಲ್ಲಿ ಒತ್ತಿಕೂಡಿಸಿಕೊಂಡು, ನಡೆದ ಸಮಾಚಾರವನ್ನೆಲ್ಲಾ ಹೇಳಿ, "ಕಂದಾ, ನೀನು ಪೂರ್ತಿ ನಿರಾಶನಾಗಬೇಡವೋ, ವಾಕ್‌ವಾಕ್ ದ್ವೀಪಗಳ ಕಡೆಗೆ ಹೋದರೆ ನಿನ್ನ ಹೆಂಡತಿ ಸಿಕ್ಕಬಹುದು. ಅಲ್ಲಿಗೆ ಬರಲಿ ಅಂದಿದ್ದಾಳಪ್ಪಾ." ಎಂದಳು, ಈ ಮಾತು ಕೇಳಿ ಹಸನ್ನನಿಗೆ ಬಾಡಿದ ಸಸಿಯ ಮೇಲೆ ನೀರು ಚಿಮುಕಿಸಿದ ಹಾಗಾಯಿತು. ಅವನು ತಟಕ್ಕನೆ ಎದ್ದುನಿಂತು, "ಅಮ್ಮಾ ನಾನು ಈಗಲೇ ವಾಕ್ ವಾಕ್ ದ್ವೀಪಗಳ ಕಡೆಗೆ ಪ್ರಯಾಣ ಮಾಡುತ್ತೇನೆ" ಎಂದನು.

ಆದರೆ ಹಕ್ಕಿಯ ಕೂಗಿನಂತಹ ಹೆಸರಿನ ದ್ವೀಪಗಳು ಎಲ್ಲಿರುತ್ತವೆ? ಅವುಗಳನ್ನು ಹುಡುಕಲು ಹಿಂದೂ ದೇಶಕ್ಕೆ ಹೋಗಬೇಕೋ ? ಪರ್ಷಿಯಾಕ್ಕೆ ಹೋಗಬೇಕೋ ? ಚೀನಾಕ್ಕೆ ಹೋಗಬೇಕೋ ? ಅವನಿಗೆ ಒಂದೂ ಗೊತ್ತಾಗಲಿಲ್ಲ.

ಅವನು ನೆಟ್ಟಗೆ ಖಲೀಫಾರವರದ ದರ್ಬಾರಿಗೆ ಹೋಗಿ ಅಲ್ಲಿರುವ ಪಂಡಿತರೆಲ್ಲರನ್ನೂ ಕಂಡು, ವಾಕ್‌ವಾಕ್ ದ್ವೀಪಗಳು ಯಾವ ಸಮುದ್ರಲ್ಲಿದೆ ಎಂದು ಕೇಳಿದನು. ಅದು ಒಬ್ಬರಿಗೂ ತಿಳಿಯದು. ಯಾರೂ ಆ ದ್ವೀಪಗಳನ್ನು ಕುರಿತು ಕೇಳಿರಲೂ ಇಲ್ಲ. ಅಂತಲೇ ಹಸನ್ನನಲ್ಲಿ ಚಿಗುರಿಕೊಂಡ ಆಶೆ, ಅಷ್ಟರಲ್ಲೇ ಕಮರಿ ಹೋಯಿತು. "ಇನ್ನು ನಾನು ಹೋಗುವುದು ಒಂದೇಸಾರಿ ಪಿತೃಲೋಕಕ್ಕೇ" ಎಂದುಕೊಳ್ಳುತ್ತ, ಅವನು ಮನೆಗೆ ಹೋಗಿ ಒಂದು ಮೂಲೆಯಲ್ಲಿ ಸ್ವಸ್ಥ ಮಲಗಿಕೊಂಡನು.

—(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

ಗೆದ್ದ ಶೀರ್ಷಿಕೆಗಳು ೧೯೮೨ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Gopal Shroti





Prabu Sankar

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಏಪ್ರಿಲ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಾಯ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು–೬೦೦ ೦೨೬

---

## ಫೆಬ್ರವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: "ಒಂಟಿ ಕಾಲಿನಲ್ಲಿ ಕುಂಟೆ ಬಾರೆಂದರೆ...

ಎರಡನೇ ಫೋಟೋ : ಜಂಟಿ ಕಾಲಿನಲ್ಲಿ ಕುಲುಕ್ತಾ ಬರ್ತಾಳೆ!"

ಕಳುಹಿಸಿದವರು: ಲತಾ ಕೆ. ಮೂರ್ತಿ, ಬೆಂಗಳೂರು–೧೦.

ಬಹುಮಾನ ರೂ. ೨೫/– ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.




## ಇದೋ!
## ಪೆಪ್ಪರ್‌ಮಿಂಟ್ ರುಚಿ ಸೇರಿದ
## ಒಂದು ಚಾಕೋಲೇಟ್ ಬಿಸ್ಕೆಟ್

# ಸ್ಕ್ರನ್ಚ್

## ಕರಕರನೆ ತಿನ್ನಲು ಒಳ್ಳೆಯ ತಿಂಡಿ

ಇಂಡಿಯಾದಲ್ಲಿ, ಇದೇ ತರಹ ಎರಡು ರುಚಿಗಳು ಸಂಯುಕ್ತಗೊಂಡಿರುವ, ಮಧುರವಾದ ತಿಂಡಿ ಎಂದರೆ, ಇದೇ ಮೊದಲನೆಯದು. ಚಾಕೋಲೇಟ್ ಮತ್ತು ಅದರಲ್ಲಿ ಸೇರಿದ ಮಿಂಟ್. ಮೃದುವಾದ, ರುಚಿಕರವಾದ, ಮಿಂಟ್ ಸೇರಿದ, ಸಮೃದ್ಧಿತ ಚಾಕೋಲೇಟ್ ಕ್ರೀಮ್— ಇದನ್ನು ಗರಿಗರಿಯಾಗಿರುವಂತೆ ಬೇಯಿಸಿದ, ಸುಂದರವಾದ ಹೊಂಬಣ್ಣದ ಎರಡು, ಬಿಸ್ಕೆಟ್‌ಗಳ ನಡುವೆ ಇಟ್ಟರೆ, ಆಹಾ! ಎಂತಹ ರುಚಿ! ನೀವು ಹಿಂದೆಂದೂ ಸವಿಯದೆ ಇರುವಂತಹ ರುಚಿ...ಇಂದೇ ಒಂದು ಪ್ಯಾಕೆಟ್ ಬಿಸ್ಕೆಟ್ ಕೊಳ್ಳಿರಿ. ಕರಕರನೆ ತಿನ್ನಿರಿ...ಸ್ಕ್ರನ್ಚ್... ಸ್ಕ್ರನ್ಚ್... ಸ್ಕ್ರನ್ಚ್...



**ಸ್ಕ್ರನ್ಚ್** ಕರಕರನೆ ತಿನ್ನಲು ಒಳ್ಳೆಯ ತಿಂಡಿ

ಟ್ರೂ ಬಿಸ್ಕೆಟ್‌ಗಳ ತಯಾರಕರು ಪ್ರಸ್ತುತಗೊಳಿಸಿರುವ ಹೊಸ ತಿಂಡಿ.

HTM-AFL-2345

# ಚಂದಾದಾರರಿಗೆ ಸೂಚನೆ

'ಚಂದಮಾಮ' ಪ್ರತಿಗಳ ರವಾನೆಗೆ ತಾವು ಕೊಟ್ಟಿರುವ ವಿಳಾಸದಲ್ಲಿ ಬದಲಾವಣೆಗಳೇನಾದರೂ ಇದ್ದಲ್ಲಿ ೫ ನೇ ತಾರೀಖಿನೊಳಗೆ ನಮಗೆ ತಲುಪುವಂತೆ, ತಮ್ಮ ಚಂದಾ ನಂಬರನ್ನು ಸೂಚಿಸುತ್ತ, ದಯವಿಟ್ಟು ಬರೆಯಿರಿ. ನಂತರ ತಲುಪುವ ವಿಳಾಸ ಬದಲಾವಣೆ ಸೂಚನೆಗಳನ್ನು ಬರುವ ತಿಂಗಳಿನ ಸಂಚಿಕೆಯಿಂದ ಮಾತ್ರ ಜಾರಿಗೆ ತರಲು ಸಾಧ್ಯ.

*

ಡಾಲ್ಟನ್ ಏಜೆನ್ಸೀಸ್

'ಚಂದಮಾಮ ಬಿಲ್ಡಿಂಗ್ಸ್'

ಮದರಾಸು-೬೦೦ ೦೨೬

CHANDAMAMA (Kannada) APRIL 1982 Regd. No. M. 5210



everest/81/PP/291-kn

ಪಾರ್ಲೆ

ಪುಟ್ಟ ಪುಟಾಣಿಗಳ
ಪ್ರೇಮ, ನಗೆಯ ಹೊನಲಾಗಿ ಹರಿಯುತ್ತದೆ

ಅವರಿಗೆ ನಿಮ್ಮ ಮಮತೆಯ ಜೊತೆಗೆ ಕೊಡಿರಿ

**ಪಾರ್ಲೆ ಗ್ಲುಕೋ–**

**ಅಪೂರ್ವವಾದ ರುಚಿ, ತುಂಬಿ ತುಳುಕುವ ಶಕ್ತಿ**

ಹಾಲು, ಗೋಧಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ
ಹಿತಕಾರಿ ಸತ್ವಗಳಿಂದ ಸಮೃದ್ಧ.



ಪಾರ್ಲೆ ಗ್ಲುಕೋ ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್